# ಚೇರಮಾನ ಕಥೆಯ ತೌಲನಿಕ ಅಧ್ಯಯನ



ಡಾ|| ಎಸ್. ವಿದ್ಯಾಶಂಕರ

ಸ್ನೇಹ
ಪ್ರಕಾಶನ
ಬೆಂಗಳೂರು-೫೬.

**Cheramana Katheya Towlanika Adhyayana,** (Cherama's Story– A comparative study), by Dr. S. Vidyashankar, Assistant Proffessor in Kannada, Bangalore University, Bangalore-560 056, Published by Sneha Prakashana, L-3, Jnanabharathi, Bangalore-56. PP. viii + 72.

Price : 6-00



ಮೊದಲನೇ ಮುದ್ರಣ—೧೯೮೧





ಬೆಲೆ :

ಆರು ರೂಪಾಯಿ

ಮುದ್ರಕರು :

ಶ್ರೀ ರೇಣುಕ ಪವರ್ ಪ್ರೆಸ್, ಓ.ಟಿ.ಸಿ. ರಸ್ತೆ, ಬೆಂಗಳೂರು-560 053.

# ಮುನ್ನುಡಿ

ನನ್ನ ಕಿರಿಯ ಸ್ನೇಹಿತರಾದ ಡಾ॥ ಎಸ್. ವಿದ್ಯಾಶಂಕರರು 'ಚೇರಮನ ಕಥೆಯ ತೌಲನಿಕ ಅಧ್ಯಯನ' ಎಂಬ ಈ ಪ್ರಬಂಧಕ್ಕೆ ಮುನ್ನುಡಿ ಬರೆದುಕೊಡಬೇಕೆಂದು ಕೇಳಿದಾಗ ನನಗೆ ಏನು ಹೇಳಬೇಕೆಂಬುದೇ ಹೊಳೆಯಲಿಲ್ಲ. ಬರೆದು ಕೊಡುವ ಮನಸ್ಸು, ಆದರೆ ಈ ಮಣಿಹಕ್ಕೆ ಸಾಲುವಷ್ಟು ಸರಕು ನನ್ನಲ್ಲಿಲ್ಲ! ಆದರೂ ದಕ್ಷಿಣ ಭಾರತದ ನಾಲ್ಕು ಸಾಹಿತ್ಯಗಳ ತೋಲನಾತ್ಮಕ ಅಧ್ಯಯನ ಸಾಕಷ್ಟು ಪ್ರಮಾಣದಲ್ಲಿ ಇನ್ನು ಮುಂದಾದರೂ ನಡೆಯಲೆಂಬ ಅಭೀಪ್ಸೆಯಿಂದ ಈ ನಾಲ್ಕು ಮಾತುಗಳನ್ನು ಬರೆಯುತ್ತಿದ್ದೇನೆ.

ಡಾ॥ ವಿದ್ಯಾಶಂಕರರು ಈ ತೆರನಾದ ಸಂಶೋಧನಾ ಕ್ಷೇತ್ರಕ್ಕೆ ಹೊಸಬರೇನಲ್ಲ. ಹಲವು ಸಂಶೋಧನಾತ್ಮಕ ಲೇಖನಗಳನ್ನು ಬರೆದಿದ್ದಾರೆ; ಗ್ರಂಥ ಸಂಪಾದನೆ ಮಾಡಿದ್ದಾರೆ. ಇಂತಹ ಕೆಲಸಕ್ಕೆ ಕೈಹಾಕುವವರ ಸಂಖ್ಯೆ ಇಳಿಮುಖವಾಗುತ್ತಿರುವಾಗ ಇವರಂಥವರು ಕೆಲವರು ಭರವಸೆ ಕೊಡುತ್ತಿರುವುದು ಸಂತೋಷದ ಸಂಗತಿಯಾಗಿರುತ್ತದೆ. ಇವರೀಗ ಹೊರತರುತ್ತಿರುವ ಪ್ರಬಂಧವು ಕನ್ನಡ ಸಂಶೋಧನಾ ಕ್ಷೇತ್ರದ ಒಂದು ಹೊಸ ಅಲೆ ಎನ್ನಬಹುದು. ತಮಿಳು ಕನ್ನಡ ಸಂಸ್ಕೃತ ತೆಲುಗು ಭಾಷೆಗಳಲ್ಲಿ ಚೇರಮನ ಮೇಲೆ ರಚಿಸಿರುವ ಕೃತಿಗಳ ಸಾರಸಂಗ್ರಹವನ್ನು ಹೇಳಿ ಅವುಗಳಲ್ಲಿರುವ ಸಾಮ್ಯವೈಷಮ್ಯಗಳನ್ನು ಚೆನ್ನಾಗಿ ವಿವೇಚಿಸಲಾಗಿದೆ ಇಲ್ಲಿ. ಈ ಬಗ್ಗೆ ಸಂಶೋಧನೆ ನಡೆಸಬಯಸುವವರಿಗೆ ಈ ಪ್ರಬಂಧವು ದಾರಿದೀಪವಾಗಿದೆ ಎಂದು ಹೇಳಬಹುದು.

ಚೇರಮನ ಅಚ್ಚುಮೆಚ್ಚಿನ ಗೆಳೆಯನಾದ ಸುಂದರಮೂರ್ತಿನಾಯನಾರನು ಈತನನ್ನು 'ತಿರುತ್ತೊಂಡತ್ತೊಹೈ'ನಲ್ಲಿ, 'ಕಾರ್‌ಕೊಂಡಕೊಡೈ ಕಟಱಿತ್ತಱಿವಾರ್ಕುಮಡಿಯೇನ್' ಎಂದು ಸ್ತೋತ್ರಮಾಡಿದ್ದಾನೆ. ದಾನದಲ್ಲಿ ಮೇಘಸದೃಶನೂ ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮಾಡುವವನೂ ಆಗಿರುವ ಚೇರಮನ ಚರಣಾಂಬುಜಕ್ಕೆ ಶರಣು—ಎಂದು ಈ ವಾಕ್ಯದ ಸ್ಥೂಲಾರ್ಥ. "ಒಂದು ಮಾತೆನ್ನಬಹುದೆ ಶಬ್ದಸಾರಾಯವನು?" ಎಂದು ಬಸವಣ್ಣನವರೇ ಹೇಳಿದ್ದಾರೆ. ಅಂತೆಯೇ ಸೌಂದರನ ಆ ಸುಂದರವೂ ಅರ್ಥಗರ್ಭಿತವೂ ಆದ -

ವಾಕ್ಯಕೂಡ. ಆ ಬೀಜಮಾತು ಬೇರೆಬೇರೆ ಭಾಷೆಯ ಬೇರೆಬೇರೆ ಕೃತಿಗಳಲ್ಲಿ ಹೇಗೆ ಅರಳಿಸಲ್ಪಟ್ಟಿದೆ ಎಂಬುದು ಬಹು ಕುತೂಹಲಕಾರಿಯಾಗಿರುವ ಸ್ವಾರಸ್ಯ ವಿಚಾರ. ಅದು ಮುಂದೆ ನಡೆಯಬೇಕಾದುದು.

'ಚೇರಮ' ಎಂಬುದು ಈ ಪುರಾತನನ ನಿಜವಾದ ಹೆಸರೆ ? ಈತನ ರಾಜಧಾನಿ ಯಾವುದು ? ಮುಂತಾದ ಪ್ರಶ್ನೆಗಳು ಇನ್ನುಮೇಲೆ ಬಗೆಹರಿಯ ಬೇಕಾಗಿದೆ. ಚೇರಮನೂ ಸೇರಿ ಎಲ್ಲಾ ಪುರಾತನರನ್ನು ಕುರಿತ ಕೃತಿಗಳನ್ನು ೧. ತಮಿಳು ಮೂಲದಿಂದ ಬಂದುವು ೨. ಸಂಸ್ಕೃತಮೂಲದಿಂದ ಬಂದುವು ಎಂದು ವಿಂಗಡಿಸಬಹುದು. ಬಸವಣ್ಣನವರು ನಂಬಿ, ಚೇರಮ, ಸಿರಿಯಾಳ ಸಿಂಧುಬಲ್ಲಾಳ, ಕರಿಕಾಲಚೋಳ, ಮುಂತಾದ ಪುರಾತನರ ಮಾಹಾತ್ಮ್ಯವನ್ನು ತಿಳಿದಿದ್ದರೆಂಬುದು ಅವರ ವಚನಗಳಿಂದಲೇ ಗೊತ್ತಾಗುತ್ತದೆ. ಆಗ ಶೇಕ್ಕಿಳಾರನ, ಪೆರಿಯಪುರಾಣದ ರಚನೆಯಾಗಿ ಬಹಳ ದಿವಸವಾಗಿರಲಿಲ್ಲ. ಕರಿಕಾಲಚೋಳನ ವೃತ್ತಾಂತವು 'ತೊಹೈ'ಯಲ್ಲಾಗಲೀ 'ಅಂದಾದಿ'ಯ ಲ್ಲಾಗಲಿ ಇಲ್ಲ. ಬಸವಣ್ಣನವರು ಸಂಸ್ಕೃತದಲ್ಲಿರುವ ಬೇರೊಂದು ಸಂಪ್ರದಾಯದ ಪುರಾತನರ ಪುರಾಣವನ್ನು ನೋಡಿರಬೇಕೆಂದೆನ್ನಿಸುತ್ತದೆ. ನಮಗೆ ಆ ಪುರಾಣ ಈಗ ಸಿಕ್ಕಿಲ್ಲ. ಸುರಂಗನಿಗೆ ಸಿಕ್ಕಿದ್ದಿತೋ ಏನೊ.

ಎರಡೂ ಸಂಪ್ರದಾಯದ ಕಥಾನಕಗಳು ಅವು ಬೆರಕೆಯಾಗುವ ಮುನ್ನವೂ ಆ ಬಳಿಕವೂ ಆಯಾ ನೆಲಗುಣಕ್ಕೆ ಹವಾಮಾನಕ್ಕೆ ಅನುಗುಣವಾಗಿ ಹೇಗೆ ರೂಪಾಂತರಗೊಂಡುವೆಂಬುದನ್ನು ಕಂಡುಕೊಳ್ಳಬೇಕಾಗಿದೆ. ಅಧ್ಯಯನ ನಡೆಸುತ್ತ ನಡೆಸುತ್ತ ಮತ್ತಷ್ಟು ಹೊಸ ಹೊಸ ಸಂದೇಹಗಳು ತಲೆದೋರಿದರೆ ಸೋಜಿಗವೇನಿಲ್ಲ.

ಹೀಗೆ, ಈ ಪುಟ್ಟ ಕೃತಿಯು ಶೈವ ಪುರಾತನರ ಕಥನಗಳನ್ನು ಬೇರೆ ಬೇರೆ ದೃಷ್ಟಿಯಿಂದ ಅಧ್ಯಯನ ನಡೆಸುವವರಿಗೆ ಪ್ರಚೋದಕವಾಗಲೆಂದೂ, ಡಾ॥ ವಿದ್ಯಾಶಂಕರರ ಸಂಶೋಧನಾಕಾರ್ಯವು ಇನ್ನೂ ವ್ಯಾಪಕವೂ ತಲಸ್ಪರ್ಶಿಯೂ ಆಗಿ ಮುಂದುವರಿಯಲೆಂದೂ ಹಾರೈಸುತ್ತೇನೆ.

ಬೆಂಗಳೂರು
ತಾ॥ ೨೮–೧೧–೮೧

ಎಚ್. ದೇವೀರಪ್ಪ

## ಲೇಖಕನ ಮಾತು

ನನ್ನ ಆಸಕ್ತಿಯ ಹಲವು ಕ್ಷೇತ್ರಗಳಲ್ಲಿ ತಮಿಳುನಾಡಿನ ಅರುವತ್ತು ಮೂವರು ಪುರಾತನರ ಅಧ್ಯಯನವೂ ಒಂದು. ಕಳೆದ ನಾಲ್ಕೈದು ವರ್ಷಗಳಿಂದ ನಂಬಿಯಣ್ಣನನ್ನು ಕುರಿತ ಸಾಹಿತ್ಯದ ತೌಲನಿಕ ಅಧ್ಯಯನ ನಡೆಸಿರುವೆನು. ಚೇರಮನ ಬಗೆಗೆ ನನಗೆ ಆಸಕ್ತಿ ಮೂಡಿದುದು ಈ ಅಧ್ಯಯನ ಸಂದರ್ಭದಲ್ಲೇ. ನನ್ನ ಅಧ್ಯಯನದ ವ್ಯಾಪ್ತಿಯನ್ನು ಕನ್ನಡಕ್ಕೆ ಮಿತಿಗೊಳಿಸಲು ಮಾಡದೆ ತಮಿಳು, ಸಂಸ್ಕೃತ ಹಾಗೂ ತೆಲುಗು ಭಾಷಾಸಾಹಿತ್ಯಕ್ಕೂ ವಿಸ್ತರಿಸಿದ್ದರಿಂದ ನನಗೆ ಹೆಚ್ಚಿನ ಲಾಭವಾಗಿದೆ. ಸಂಶೋಧಕನಿಗೆ ಅನ್ಯಭಾಷೆಗಳ ಜ್ಞಾನವಿದ್ದರೆ ಅವನ ಅಧ್ಯಯನಕ್ಕೆ ಅದು ಎಷ್ಟು ಸಹಾಯ ಮಾಡುತ್ತದೆಂಬುದರ ನಿಜವಾದ ತಿಳುವಳಿಕೆ ಆಗ ನನಗಾಯಿತು. ಅದು ಎಷ್ಟೇ ಶ್ರಮದಾಯಿಯಾದರೂ, ಅಧ್ಯಯನ ತಲಸ್ಪರ್ಶಿಯಾಗುತ್ತಾ ಹೋದಂತೆ ಹೊಸ ಹೊಸ ಸಂಗತಿಗಳು ತಿಳಿದು ಬಂದಾಗ ಮನಸ್ಸಿಗೆ ಉಂಟಾಗುವ ಆನಂದ ವರ್ಣನಾತೀತ. ನನ್ನ ಅಧ್ಯಯನದ ಹಲವು ಸಂದರ್ಭಗಳಲ್ಲಿ ಈ ಅಪೂರ್ವ ಸುಖದ ಸವಿಯನ್ನು ಅನುಭವಿಸಿದ್ದೇನೆ.

ಚೇರಮನ ನಿಜವಾದ ಹೆಸರಾವುದು ? ಇವನ ರಾಜಧಾನಿ ಯಾವುದು ? ಇವನ ಕಾಲದ ರಾಜಕೀಯ ಸ್ಥಿತಿ–ಗತಿಗಳೇನು ? ನೆರೆ ರಾಜ್ಯದ ಅರಸರುಗಳೊಡನೆ ಇದ್ದ ರಾಜಕೀಯ ಸಂಬಂಧ ಯಾವ ತೆರನದು ? ಇವೇ ಮೊದಲಾದ ಪ್ರಶ್ನೆಗಳಿಗೆ ಖಚಿತವಾದ ಉತ್ತರ ಹೇಳುವುದು ಕಷ್ಟ. ಚೇರರ ಬಗೆಗೆ ನಾಲ್ಕರಿಂದ ಎಂಟನೆ ಶತಮಾನದ ಕೊನೆಯವರೆವಿಗೆ ಹೆಚ್ಚಿಗೆ ಏನೂ ತಿಳಿದುಬರುವುದಿಲ್ಲ. "ಕ್ರಿ.ಶ. ೮೦೦ರಲ್ಲಿ ಕುಲಶೇಖರವರ್ಮನ ಮೂಲಕ ಚೇರರು ಪುನರ್ ಪ್ರತಿಷ್ಠಾಪನೆಗೊಂಡರು. ಇವನು ಬೇರೆ ಯಾರೂ ಆಗಿರದೆ ದಕ್ಷಿಣದ ವೈಷ್ಣವ ಚಳುವಳಿಯ ಇತಿಹಾಸದಲ್ಲಿ ಪ್ರಮುಖನಾದ ಕುಲಶೇಖರ ಆಳ್ವಾರನಾಗಿರುವನು. ಇವನು ಮಹೋದಯಪುರಂ ಅಥವಾ ತಿರುವಂಜಿಕುಲಂ ಅನ್ನು ತನ್ನ ರಾಜಧಾನಿಯನ್ನಾಗಿ ಹೊಂದಿದ್ದು ಸು. ೨೦ ವರ್ಷಗಳ ಕಾಲ ರಾಜ್ಯಭಾರಮಾಡಿದನು. ಇವನ ಉತ್ತರಾಧಿಕಾರಿಯಾದ ರಾಜಶೇಖರ ವರ್ಮನು ಶಾಸನವೊಂದನ್ನೂ ಬಿಟ್ಟಿದ್ದು, ನಿಷ್ಠಾವಂತ ಶೈವನಾಗಿರುವನು.

ವಾಸ್ತವಾಂಶವೆಂದರೆ, ಇವನನ್ನು ಶೈವಭಕ್ತ ಚೇರಮಾನ್ ಪೆರುಮಾಳ್ ನಾಯ ನಾರ್ ಎಂದು ಗುರುತಿಸಲಾಗಿದೆ. ಕುಲಶೇಖರ ವರ್ಮನ್ ಹಾಗೂ ರಾಜಶೇಖರ ವರ್ಮನ್ ಈ ಇಬ್ಬರೂ ಅದ್ವೈತ ತತ್ತ್ವಜ್ಞಾನಿ ಶಂಕರಾಚಾರ್ಯರ ಸಮಕಾಲೀನರೆಂದು ಭಾವಿಸಲಾಗಿದೆ."1

ಚೇರರು ವಿಸ್ತಾರವಾದ ಪ್ರಾಂತ್ಯವನ್ನು ಸ್ವಾಧೀನಪಡಿಸಿಕೊಂಡಿದ್ದು ಬಹುಶಃ ಇದಕ್ಕೆ ಕೊಂಗು ದೇಶವೂ (ಸೇಲಂ ಹಾಗೂ ಕೊಯಮುತ್ತೂರು ವಿಭಾಗ) ಸೇರಿದ್ದಿರಬೇಕು. ಇವರ ರಾಜಧಾನಿ ಕರೂರು ಎಂದೂ ಹೇಳಲಾಗುವ ವಂಜಿಯಾಗಿದ್ದಿತು. ಇದು ಎಲ್ಲಿದ್ದಿತೆಂಬುದನ್ನು ಖಚಿತವಾಗಿ ಹೇಳಲಾಗದು. ಏಕೆಂದರೆ ಇದನ್ನು ಕ್ರಿಂಗನೂರಿನ (ಕೊಡುಂಗಲ್ಲೂರ್) ಸಮೀಪವಿರುವ ತಿರುವಂಜಿಕುಲಮ್; ಕೇರಳದ ಕ್ರಿಂಗನೂರಿನ ಬಳಿಯಿರುವ ಕರೂರಪದ್ನ; ತಮಿಳುನಾಡಿನ ತಿರುಚ್ಚಿರಪಳ್ಳಿಯ ಹತ್ತಿರವಿರುವ ಕರೂರ್–ಹೀಗೆ ಬಹು ವಿಧವಾಗಿ ಗುರುತಿಸಲಾಗಿದೆ2.

ಚೇರಮನ ಬಗೆಗೆ ಒಂದು ಲೇಖನ ಬರೆಯಲು ಸಾಮಗ್ರಿ ಸಂಗ್ರಹಿಸ ಹೊರಟ ನಾನು, ಈ ಪುಸ್ತಕ ಬರೆದೆ. ಚೇರಮನನ್ನು ಕುರಿತ ಅಪಾರ ಸಾಹಿತ್ಯ ರಾಶಿಯನ್ನು ನಾನು ನೋಡಿ ಮೂಕವಿಸ್ಮಿತನಾದೆ. ಚೇರಮನ ಬದುಕನ್ನು ಕುರಿತ ತೌಲನಿಕ ಅಧ್ಯಯನ ಈ ಪುಟ್ಟ ಕೃತಿಯಲ್ಲಿದೆ. ಈ ರೀತಿಯ ಅಧ್ಯಯನ ಕನ್ನಡದಲ್ಲೇ ಆಗಲಿ, ತಮಿಳಿನಲ್ಲೇ ಆಗಲಿ ನಡೆದಿಲ್ಲನೆಂಬುದು ಸಂತೋಷದ ಸಂಗತಿ. ನನ್ನ ಅಧ್ಯಯನದ ವೇಳೆಯಲ್ಲಿ ಸಂಸ್ಕೃತ ಕೃತಿಗಳಾದ ಅಗಸ್ತ್ಯ 'ಶಿವ ಭಕ್ತವಿಲಾಸ' ಹಾಗೂ ಉಪಮನ್ಯು 'ಶಿವಭಕ್ತಿವಿಲಾಸ'ಗಳನ್ನು ನೋಡಲಾಗ ಲಿಲ್ಲ. ಇವನ್ನು ದೊರಕಿಸಿಕೊಳ್ಳಲು ಎಷ್ಟೇ ಪ್ರಯತ್ನಿಸಿದರೂ ಸಕಾಲಕ್ಕೆ

---

1. H. Sarkar: Monuments of Kerala, Pub.: The Director General, Archaelogical Survey of India, New Delhi (1973), pp. 4.
2. ಅದೇ ಪು. ೨–೩.

ಇವು ಸಿಗಲಿಲ್ಲ. ಉಪಮನ್ಯು 'ಶಿವಭಕ್ತಿ ವಿಲಾಸ'ದ ಉಲ್ಲೇಖ ನನ್ನ ಈ ಕೃತಿಯಲ್ಲಿ ಹಲವಾರು ಕಡೆ ಬಂದಿದೆ. ಮೂಲವನ್ನು ನೋಡಿಲ್ಲದ ನಾನು ಅಲ್ಲೆಲ್ಲಾ ಅದನ್ನು ನೋಡಿರುವ ವಿದ್ವಾಂಸರ ಅಭಿಪ್ರಾಯವನ್ನು ಆಧರಿಸಿ ಹೇಳಿರುವೆನು. ಕನ್ನಡದಲ್ಲಿ ಚೇರಮನ ಬಗೆಗೆ ಬಂದಿರುವ ಸಾಹಿತ್ಯವೆಲ್ಲವನ್ನೂ ಪರಿಶೀಲಿಸಿರುವೆನು. ಕೆಲವು ಕೃತಿಗಳಲ್ಲಿ ಬರುವ ಸಾಂದರ್ಭಿಕ ಉಲ್ಲೇಖ(Side refference) ನನ್ನ ಕಣ್ತಪ್ಪಿಹೋಗಿರಬಹುದು. ಓದುಗರು ಅಂತಹ ಸಂದರ್ಭಗಳಲ್ಲಿ ನನ್ನ ಮರೆವನ್ನು ಮನ್ನಿಸಬೇಕು.

ಹಿರಿಯ ವಿದ್ವಾಂಸರಾದ ಶ್ರೀ ಎಚ್. ದೇವೀರಪ್ಪನವರು ಈ ಕೃತಿಗೆ ಮುನ್ನುಡಿ ಬರೆದಿರುವುದರಲ್ಲಿ ಔಚಿತ್ಯವಿದೆ. ತಮಿಳುನಾಡಿನ ಅರುವತ್ತು ಮೂವರು ಪುರಾತನರ ಬಗೆಗೆ ಅವರಷ್ಟು ವ್ಯಾಪಕವಾಗಿ ಅಧ್ಯಯನ ನಡೆಸಿದವರು ಕನ್ನಡದಲ್ಲಿ ಮತ್ತೊಬ್ಬರಿಲ್ಲ. ಹರಿಹರನ ಕೃತಿಗಳ ಅಧ್ಯಯನಕ್ಕೆ ಹಾಗೂ ತಮಿಳು ಶೈವ ಸಂತರ ಅಧ್ಯಯನಕ್ಕೆ ಅವರ ಬದುಕು ಮೀಸಲಾಗಿದೆ. ಇಂತಹ ಸಹೃದಯ ವಿದ್ವಾಂಸರು ನನ್ನ ಕೃತಿಗೆ ಮುನ್ನುಡಿ ಬರೆಯುತ್ತಿರುವುದು ನನಗೆ ಅತ್ಯಂತ ಸಂತೋಷದ ವಿಷಯ. ಅದಕ್ಕಾಗಿ ಅವರಿಗೆ ನನ್ನ ಗೌರವಪೂರ್ವಕ ಪ್ರಣಾಮಗಳು.

ಈ ಕೃತಿ ಅಲ್ಪಕಾಲಾವಧಿಯಲ್ಲಿ ಚೆನ್ನಾಗಿ ಮುದ್ರಣಗೊಂಡಿದೆ. ಶ್ರೀ ರೇಣುಕ ಪವರ್ ಪ್ರೆಸ್‌ನ ಮಾಲೀಕರು ಹಾಗೂ ಕೆಲಸಗಾರರು ಒಳ್ಳೆಯ ಸಹಕಾರ ನೀಡಿರುವರು. ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಗಳು.

ಎಸ್. ವಿದ್ಯಾಶಂಕರ

# ಚೇರಮನ ಕಥೆಯ ತೌಲನಿಕ ಅಧ್ಯಯನ

ಚೇರ, ಚಾರಮ, ಚೇರಮ, ಚೇರಮಾನ್ ಪೆರುಮಾಳ್, ಚೇರಮ ರಾಯ, ಚೇರಮ ಚಕ್ರವರ್ತಿ ಎಂದೆಲ್ಲಾ ಉಲ್ಲೇಖಿತನಾಗಿರುವ ಈತ ಕೇರಳ ದೇಶದ ಅರಸು ; ನಂಬಿಯಣ್ಣನ ಪರಮಮಿತ್ರ : ಶಿವನನ್ನು ತನ್ನ ನಿಷ್ಠಾಪೂರ್ಣ ಭಕ್ತಿಯಿಂದ ಒಲಿಸಿಕೊಂಡ ಶ್ರೇಷ್ಠಭಕ್ತ. ನಂಬಿಯಣ್ಣನ ಸಮಕಾಲೀನನಾದ ಈತನ ಕಾಲವನ್ನು ೯ನೇ ಶತಮಾನದ ಮೊದಲ ಅರ್ಧ ಭಾಗವೆಂದು ಹೇಳಬಹುದು.[1] ೬೩ ಮಂದಿ ಪುರಾತನ ಭಕ್ತರಲ್ಲಿ ಚೇರಮನೂ ಒಬ್ಬನಾಗಿದ್ದು ಇವನನ್ನು ಸುಂದರನು (ನಂಬಿಯಣ್ಣನು) ತನ್ನ 'ತಿರುತ್ತೊಂಡ ತ್ತೊಗೈ'ಯಲ್ಲಿ ದಾನಕೊಡುವುದರಲ್ಲಿ ಮೇಘವನ್ನು ಹೋಲುವನೆಂದು ವಿಶೇಷಿಸಿ ಹೇಳಿರುವನು. ಶೇಕ್ಕಿಳಾರ್ ನಿರೂಪಿಸಿರುವಂತೆ, ಶಿವನಿಂದ ಪತ್ರವನ್ನು ತಂದ ಸಂಗೀತಗಾರ ಪಾಣಪತ್ತಿರರ್‌ಗೆ ಮುತ್ತುರತ್ನ, ಚಿನ್ನ,

---

1. ನಂಬಿಯಣ್ಣನ ಕಾಲವನ್ನು ೯ನೇ ಶತಮಾನದ ಮೊದಲ ಅರ್ಧಭಾಗವೆಂದು ಹೇಳಲಾಗಿದೆ. (ಕಾಲದ ಚರ್ಚೆಯ ವಿವರಗಳಿಗೆ ನೋಡಿ : The Religion and philosophy of Tevaram I : M. A. Dorai Rangaswamy (1958) University of Madras, pp. 114-177).

ವಸ್ತ್ರಗಳ ಜೊತೆಗೆ ತನ್ನ ರಾಜ್ಯವನ್ನೂ ಚೇರಮಾನ್‌ನು ಕೊಡಹೊರಡುವನು. ಚೇರಮನ ಕಥೆ ತಮಿಳು, ಕನ್ನಡ, ಸಂಸ್ಕೃತ, ತೆಲುಗು ಭಾಷಾ ಸಾಹಿತ್ಯದಲ್ಲಿ ಪ್ರಸಿದ್ಧವಾಗಿದೆ. ಸುಂದರನ ಕಥೆ ಬರುವೆಡೆಯಲ್ಲೆಲ್ಲಾ ಚೇರಮನ ಕಥೆಯೂ ಬರುತ್ತದೆ. ಕನ್ನಡನಾಡಿನಲ್ಲಿ ಬಸವಣ್ಣನ ಕಾಲಕ್ಕಾಗಲೇ ಚೇರಮನ ಕಥೆ ಪ್ರಸಿದ್ಧಿಗೆ ಬಂದಿರಬೇಕು. ಬಸವಣ್ಣ ತನ್ನ ವಚನವೊಂದರಲ್ಲಿ2 'ಚೆನ್ನ ಚೇರಮರ ಬಂಟ ನಾನಯ್ಯ' ಎಂದು ಹೇಳಿರುವನು. ಹರಿಹರನ ಪುರಾತನರ ರಗಳೆಗಳಲ್ಲಿ ಚೇರಮನನ್ನು ಕುರಿತ ರಗಳೆ ಕಂಡುಬರುವುದಿಲ್ಲ. ಚೇರಮನ ಬಗೆಗೆ ಅವನು 'ನಂಬಿಯಣ್ಣನ ರಗಳೆ'ಯಲ್ಲಿ ಸಾಕಷ್ಟು ಹೇಳಿರುವ ಕಾರಣ ಪ್ರತ್ಯೇಕವಾಗಿ ಆ ಭಕ್ತನ ಬದುಕನ್ನು ರಗಳೆಯಲ್ಲಿ ಹೇಳಲಿಲ್ಲವೆಂದು ತೋರುತ್ತದೆ. ನಂಬಿಯಣ್ಣನ ಬದುಕನ್ನು ಕನ್ನಡದ ವೀರಶೈವ ಕವಿಗಳು ತಮ್ಮ ಕೃತಿಗೆ ವಸ್ತುವಾಗಿ ಸ್ವೀಕರಿಸಿದಂತೆ ಚೇರಮನ ಬದುಕನ್ನೂ ವಸ್ತುವಾಗಿ ಸ್ವೀಕರಿಸಿರುವರು.

ತಮಿಳಿನಲ್ಲಾಗಲೀ, ತೆಲುಗಿನಲ್ಲಾಗಲೀ ಚೇರಮನ ಬದುಕನ್ನು ಕುರಿತ ಪ್ರತ್ಯೇಕ ಕೃತಿ ನಮಗೆ ತಿಳಿದುಬಂದಂತೆ ಕಂಡುಬಂದಿಲ್ಲ. ವಿರುಪರಾಜನ (೧೫೮೯) 'ತ್ರಿಭುವನ ತಿಲಕ', ಚೇರಮಾಂಕನ (೧೫೨೬) 'ಚೇರಮ ಕಾವ್ಯ', ಶಂಕರದೇವನ (೧೬೨೦) 'ಚೇರಮನ ರಗಳೆ', ಹರಿಹರೇತರ ಕೃತ ವಿರೂಪಾಕ್ಷಾಂಕಿತದ (ಸು. ೧೭೪೫) 'ಚೇರಮನಾಯನಾರ್ ರಗಳೆ'—ಈ ಕವಿಗಳ ಕೃತಿಗಳು ಚೇರಮನನ್ನು ಕಥಾನಾಯಕನನ್ನಾಗಿ ಸ್ವೀಕರಿಸಿ ಅವನ ಬದುಕನ್ನು ಚಿತ್ರಿಸಿವೆ. ಇವಲ್ಲದೆ ಅಸಂಖ್ಯ ವೀರಶೈವ ಕವಿಗಳು ನಂಬಿಯಣ್ಣನ ಕಥೆಯನ್ನು ಹೇಳುವಾಗ ಸಾಂದರ್ಭಿಕವಾಗಿ ಚೇರಮನ ಕಥೆಯನ್ನೂ ಹೇಳಿರುವರು. ಅಲ್ಲದೆ, ಅನೇಕ ವೀರಶೈವ ಕೃತಿಗಳಲ್ಲಿ ಉಪಕಥೆಯ ರೂಪದಲ್ಲಿ ಚೇರಮನ ಬದುಕಿನ ಮುಖ್ಯ ಘಟನೆಗಳು ಉದಾಹೃತವಾಗಿವೆ. ಇವುಗಳನ್ನು ಪರಿಶೀಲಿಸಿದಾಗ, ಕನ್ನಡ ಕವಿಗಳಿಗೆ ನಂಬಿಯಣ್ಣನಷ್ಟೇ ಪ್ರಿಯನಾದ ವ್ಯಕ್ತಿ ಚೇರಮನೆಂಬುದು ವಿದಿತವಾಗುತ್ತದೆ.

---

2. ಬಸವಣ್ಣನವರ ಷಟ್‌ಸ್ಥಲದ ವಚನಗಳು (ಸಂ॥ ಪ್ರೊ. ಬಸವನಾಳ ಶಿವಲಿಂಗಪ್ಪ) ಜನಪ್ರಿಯ ಆವೃತ್ತಿ, ವ. ೩೪೦.

ತಮಿಳುನಾಡಿನ ನೀಟೂರ್‌ನಲ್ಲಿ ಚೇರಮಾನ್ ಪೆರುಮಾಳನಾಯನಾರನ ದೇವಾಲಯವೊಂದಿದ್ದು ಅದನ್ನು 'ಕೊಣ್ಣವಾಶಿಚಿವಾರ್ ಕೋಯಿಲ್' ಎಂದು ಕರೆಯುವರು. ಇದು ಚೇರಮನಿಗೆ ಸಂಬಂಧಿಸುತ್ತದೆಯೋ ಅಥವಾ ಪರಮಾತ್ಮನಿಗೆ ಸಂಬಂಧಿಸುತ್ತದೆಯೋ ಸ್ಪಷ್ಟವಾಗುವುದಿಲ್ಲ. ನಮಗೆ ತಿಳಿದಂತೆ ವಿಷ್ಣುವನ್ನು 'ಕೊಣ್ಣವಣ್ಣಮ್ ಸೆಯ್ಯುಂ ಪೆರುಮಾಳ್' ಎಂದು ಕರೆಯಲಾಗುವುದು ಎಂದು ಎಂ. ಎ. ದೊರೈ ರಂಗಸ್ವಾಮಿಯವರು ಹೇಳುವರು.3 ಚೇರಮನ ಕಥೆ ಹನ್ನೆರಡನೆಯ ಶತಮಾನಕ್ಕಾಗಲೇ ಕನ್ನಡ ನಾಡಿನಲ್ಲಿ ಪ್ರಚಾರದಲ್ಲಿದ್ದರೂ, ಮುಂದಣ ವೀರಶೈವ ಕವಿಗಳಿಗೆ ಅವನ ಬದುಕಿನ ಘಟನಾವಳಿಗಳು ಪ್ರೇರಣೆ ನೀಡಿದ್ದರೂ, ಕರ್ನಾಟಕದಲ್ಲಿ ಎಲ್ಲೂ ಅವನ ಹೆಸರಿನ ದೇವಾಲಯ ಕಂಡುಬರುವುದಿಲ್ಲ. ತಮಿಳುನಾಡಿನ ಅರುವತ್ತು ಮೂವರು ಶೈವಭಕ್ತರು ಕನ್ನಡಿಗರಿಗೆ ಪೂಜಾರ್ಹ ವ್ಯಕ್ತಿಗಳಾಗಿರುವರು. ಅರವತ್ತುಮೂವರು ಶೈವಭಕ್ತರ ಮೂರ್ತಿಗಳನ್ನು ಚಾಮರಾಜನಗರ, ನಂಜನಗೂಡು—ಈ ಸ್ಥಳದಲ್ಲಿನ ದೇವಾಲಯಗಳಲ್ಲಿ ಪ್ರತಿಷ್ಠಾಪಿಸಲಾಗಿದ್ದು ಇಂದಿಗೂ ಇವುಗಳ ಪೂಜೆಮಾಡಲಾಗುತ್ತಿದೆ.

ಸಂಸ್ಕೃತದಲ್ಲಿ ಪ್ರತ್ಯೇಕವಾಗಿ ಚೇರಮನನ್ನು ಕುರಿತ ಕೃತಿ ಬಂದಿಲ್ಲ. ಅರುವತ್ತುಮೂವರು ಪುರಾತನರ ಬದುಕನ್ನು ಅಗಸ್ತ್ಯ, ಉಪಮನ್ಯು ಮುನಿಗಳು ಸಂಸ್ಕೃತದಲ್ಲಿ ಹೇಳಿರುವರು. ಕರ್ತೃವಿನ ಹೆಸರು ತಿಳಿಯದ 'ಶಿವರಹಸ್ಯ' ಎಂಬ ಮತ್ತೊಂದು ಕೃತಿಯಲ್ಲೂ ಅರುವತ್ತುಮೂವರು ಭಕ್ತರ ಕಥೆಗಳು ವಿವರಣೆಗೊಂಡಿದೆ. ಸಂಸ್ಕೃತ ಕೃತಿಗಳು ತಮಿಳು ಭಾಷೆಯಲ್ಲಿ ಮೂಡಿ ಬಂದ ಅರುವತ್ತುಮೂವರು ಭಕ್ತರ ಸಾಹಿತ್ಯವನ್ನು ಆಧರಿಸಿರುವುದಾಗಿ ವಿದ್ವಾಂಸರು ಅಭಿಪ್ರಾಯಪಡುವರು.

ತೆಲುಗಿನಲ್ಲಿ ಚೇರಮನ ಕಥೆ ಮೊದಲಿಗೆ ಕಂಡುಬರುವುದು ಪಾಲ್ಕುರಿಕೆ ಸೋಮನಾಥನ ಕೃತಿಗಳಲ್ಲಿ. ಇವನಿಗೂ ಮೊದಲು ಮಲ್ಲಿಕಾರ್ಜುನ ಪಂಡಿತನು

---

3. The religion and philosophy of Tevaram II, pp 1023-1024.

(ಸು. ೧೧೬೦) ತನ್ನ 'ಗಣಸಹಸ್ರನಾಮ'ದಲ್ಲಿ ಚೇರಮನ ಹೆಸರನ್ನು ಹೇಳಿರುವನು. ಪಾಲ್ಕುರಿಕೆ ಸೋಮನಾಥನ ಕಾಲಕ್ಕೆ (೧೩೦೫) ಚೇರಮನ ಕಥೆ ಆಂಧ್ರದೇಶದಲ್ಲಿ ಪ್ರಚಲಿತವಿದ್ದಿರಬಹುದು. ಶ್ರೀಶೈಲಕ್ಕೆ ಕರ್ನಾಟಕ ಹಾಗೂ ತಮಿಳು ನಾಡುಗಳಿಂದ ಯಾತ್ರಾರ್ಥಿಗಳು ಬರುತ್ತಿದ್ದು. ಅವರಿಂದಾಗಿ ಆಂಧ್ರ ದೇಶದಲ್ಲಿ ಬಸವಾದಿ ಶಿವಶರಣರ ಬಗೆಗೆ ಹಾಗೂ ಅರುವತ್ತು ಮೂವರು ಪುರಾತನರ ಬಗೆಗೆ ಪ್ರಚಾರವಾಯಿತೆಂದು ಹೇಳಬಹುದು. ಸಿರಿಯಾಳ ಚೇರಮರ ಕಥೆಯುನ್ನು ಶ್ರೀಶೈಲದಲ್ಲಿ ಶಿವರಾತ್ರಿಯಂದು ಭಕ್ತರು ಹಾಡುತ್ತಿದ್ದರೆಂಬುದು ಪಾಲ್ಕುರಿಕೆ ಸೋಮನಾಥನ 'ಪಂಡಿತಾರಾಧ್ಯ ಚರಿತ್ರ'ದಿಂದ ತಿಳಿದು ಬರುತ್ತದೆ. ಪಾಲ್ಕುರಿಕೆ ಸೋಮನಾಥನು ವಾಗ್‌ಪರಂಪರೆಯನ್ನು ಆಧರಿಸಿ ಭಕ್ತರ ಕಥೆಗಳನ್ನು ತನ್ನ ಬಸವ ಪುರಾಣಮು ಹಾಗೂ ಪಂಡಿತಾರಾಧ್ಯ ಚರಿತ್ರಗಳಲ್ಲಿ ಹೇಳುವುದರಿಂದ ಸಾಕಷ್ಟು ವ್ಯತ್ಯಾಸಗಳು ಅಲ್ಲಿ ತಲೆದೋರಿವೆ.

ತಮಿಳುನಾಡಿನಲ್ಲಿ ಶೇಕ್ಕಿಳಾರನಿಗಿಂತ ಪೂರ್ವದಲ್ಲಿಯೇ ಚೇರಮನ ಕಥೆ ಜನಪದದಲ್ಲಿ ಸಾಕಷ್ಟು ಪ್ರಚಾರದಲ್ಲಿದ್ದಿತು. ಅದನ್ನು ಆಧರಿಸಿ ಶೇಕ್ಕಿಳಾರ್ 'ಪೆರಿಯ ಪುರಾಣಂ' ರಚಿಸಿರುವನು. ಚೇರಮನ ಕಥೆ ತಮಿಳುನಾಡಿನಲ್ಲಿ ಎಷ್ಟು ಜನಪ್ರಿಯವಾಗಿದ್ದಿತೆಂದರೆ, ಚೇರಮನು ಮುಸ್ಲಿಮನಾಗಲು ಮಲಯಾಳ ದೇಶದಿಂದ ಮೆಕ್ಕಾಗೆ ಹೋದನೆಂದೂ, ಅಂದಿನಿಂದ ಕೊಲ್ಲಂ ಕಾಲಮಾನ ಪ್ರಾರಂಭವಾಯಿತೆಂದೂ ಪ್ರಚಲಿತವಿರುವ ಐತಿಹ್ಯವೊಂದು ಹೇಳುತ್ತದೆ.[4] ಇದರ ಸತ್ಯಾಸತ್ಯತೆ ಏನೇ ಇರಲಿ, ಚೇರಮನ ವ್ಯಕ್ತಿತ್ವಕ್ಕೆ ಮಾರುಹೋದ ಮುಸ್ಲಿಮರು ಅವನನ್ನು ತಮ್ಮವನನ್ನಾಗಿ ಮಾಡಿಕೊಳ್ಳಹೊರಟುದು ಅವನು ಪಡೆದ ಜನಪ್ರಿಯತೆಯನ್ನು ಸಂಕೇತಿಸುತ್ತದೆ,

## ತಮಿಳು : ಶೇಕ್ಕಿಳಾರ್

ಶೇಕ್ಕಿಳಾರನ (ಕ್ರಿ. ಶ. ೧೧೩೩–೧೧೫೦) 'ಪೆರಿಯ ಪುರಾಣಂ'ನ ವಾರ್ ಕೊಣ್ಟ ವನಟಿಲ್ಯೈಯಾಳ್ ಚರುಕ್ಕಮ್‌ನಲ್ಲಿ 'ಕಟಿಱಿಟ್ರಿಱಿವಾರ್ ನಾಯನಾರ್

4. ನೋಡಿ : The religion and philosophy of Tevaram : M. A. Dorai Rangaswamy, pp. 126.

ಪುರಾಣಮ್' ಎಂಬ ಭಾಗವು ಪ್ರಸ್ತುತ ಚೇರಮನ ಕಥೆಯನ್ನು ಹೇಳುತ್ತದೆ. (ಪೆರಿಯ ಪುರಾಣಂನ ಹಲವು ಹಸ್ತಪ್ರತಿಗಳಲ್ಲಿ 'ಕಟಱಿಱ್ಱಿಱಿವಾರ್ ನಾಯ ನಾರ್' ಎಂಬುದಕ್ಕೆ ಬದಲಾಗಿ 'ಚೇರಮಾನ್ ಪೆರುಮಾಳ್ ನಾಯನಾರ್' ಎಂದಿದೆ.) ಮಲೈನಾಟ್ಟು ಅಥವಾ ಚೇರರಾಜ್ಯದಲ್ಲಿ ಕೊಡುಂಕೋಳೂರು ಚೇರ ರಾಜನ ರಾಜಧಾನಿಯಾಗಿದ್ದು ಅಲ್ಲಿ ಶೈವ ದೇವಾಲಯವಿರುವ ತಿರುವಂಜಿಕ್ಕಳ ವಿದೆ. ಚೇರರು ಕೋಟ್ಟೈ ಎಂದೂ ಅವರ ಪಟ್ಟಣವು ಮಾಕೋಟ್ಟೈ ಎಂದೂ ಪ್ರಸಿದ್ಧವಾಗಿರುವುದು. ಚೇರರ ಕುಟುಂಬದಲ್ಲಿ ಪೆರುಮಾಕ್ಕೋಟ್ಟೈಯಾರ್ ಜನಿಸಿದನು. ಚೇರರಾಜನಾದ ಪೊರೈಯಾನ್‌ನು ತಪಸ್ಸುಮಾಡಲೆಂದು ರಾಜ್ಯ ತ್ಯಾಗಮಾಡಿದಾಗ ಇವನು ತಿರುವಂಜಿಕ್ಕಳಂನಲ್ಲಿ ಸೇವೆ ಸಲ್ಲಿಸುತ್ತಿದ್ದನು. ಇವ ನನ್ನು ಮಂತ್ರಿಗಳು ಸಂದರ್ಶಿಸಿ ತಮ್ಮ ರಾಜನಾಗಬೇಕೆಂದು ಪ್ರಾರ್ಥಿಸಿದರು. ರಾಜ್ಯವನ್ನು ಅಂಗೀಕರಿಸುವ ವಿಚಾರದಲ್ಲಿ ಪರಮಾತ್ಮನ ಅಭಿಮತವನ್ನು ಇವನು ಮೊದಲಿಗೆ ತಿಳಿಯಬಯಸಿದನು. ಪರಮಾತ್ಮನು ಇವನನ್ನು ಆಶೀರ್ವದಿಸುತ್ತ ಸಾಮ್ರಾಜ್ಯತ್ವ, ದೇವರಿಗೆ ಪ್ರೀತಿಯಿಂದ ಸೇವೆ ಸಲ್ಲಿಸುವುದು, ಮನುಷ್ಯ ಪ್ರಾಣಿ ಮೊದಲಾದ ಜೀವಜಾಲಗಳ ಹೃದಯವನ್ನು ತಿಳಿಯುವ ಜ್ಞಾನ, ಅಜೇಯ ಪರಾಕ್ರಮ, ಮಹಾದಾನಗುಣ, ಆಯುಧಗಳು ಹಾಗೂ ವಾಹನ ಇವುಗಳನ್ನು ಅನುಗ್ರಹಿಸಿದನು. ಅನಂತರ ಇವನು ರಾಜನಾಗಲು ಒಪ್ಪಿಗೆ ನೀಡಿದನು.

ಚೇರಮಾನನು ಆನೆಯ ಮೇಲೆ ಕುಳಿತು ನಗರಪ್ರವೇಶಮಾಡುತ್ತಿರುವಾಗ ಓರ್ವ ಅಗಸರವನು ಕಣ್ಣಿಗೆ ಬಿದ್ದನು. ಭಸ್ಮೋದ್ಧೂಳಿತನಂತೆ ಕಾಣುತ್ತಿದ್ದ ಆ ಅಗಸನನ್ನು ಶಿವಭಕ್ತನೆಂದೇ ಭಾವಿಸಿದ ರಾಜನು ಆನೆಯಿಂದಿಳಿದು ಭಕ್ತಿ ಯಿಂದ ಅವನಿಗೆ ವಂದಿಸಿದನು. ಅಗಸನು ಭಯಗೊಂಡು ನಿಜಸಂಗತಿಯನ್ನು ತಿಳಿಸಿದರೂ ಚೇರಮಾನನು ಕೇಳಲೇ ಇಲ್ಲ. ಚೋಳ ಹಾಗೂ ಪಾಂಡ್ಯ ರಾಜರ ಜೊತೆಗೂಡಿ ಒಳ ಹಾಗೂ ಹೊರಗಣ ಶತ್ರುಗಳನ್ನೆಲ್ಲಾ ಗೆದ್ದ ಚೇರಮಾನನು ವಿಭೂತಿ ಮಹಿಮೆಯಿಂದ ಉನ್ನತೋನ್ನತಿಯನ್ನು ಹೊಂದಿದನು. ಅವನು ರಾಜನ ಸಂತೋಷ ಹಾಗೂ ಸಂಪತ್ತು ಚಿದಂಬರೇಶ್ವರನ ಪಾದಗಳಲ್ಲೇ ನೆಲೆಸಿದೆ ಯೆಂಬುದನ್ನು ಅರಿಯುವವನಾದನು. ಚಿದಂಬರೇಶ್ವರನು ನಾಟ್ಯವಾಡುವಾಗ

ತನ್ನ ಪಾದದಂದುಗೆಯ ಮಧುರಧ್ವನಿಯು ನಿತ್ಯವೂ ಅವನಿಗೆ ಪೂಜೆಯ ಕೊನೆಯಲ್ಲಿ ಕೇಳುವಂತೆ ಅನುಗ್ರಹಿಸಿದನು.

ಪಾಣನೆಂಬ ಸಂಗೀತಗಾರನು ಮಧುರೆಯೊಡೆಯನ ಪರಮಭಕ್ತನಾಗಿದ್ದು ಸಂಗೀತ ಕೃತಿಗಳಿಂದ ಪರಮಾತ್ಮನನ್ನು ಆರಾಧಿಸುತ್ತಿದ್ದನು. ಒಂದು ದಿನ ಪರಮಾತ್ಮನು ಅವನ ಕನಸಿನಲ್ಲಿ ಕಾಣಿಸಿಕೊಂಡು, ತಾನು ಕೊಡುವ ಓಲೆಯನ್ನು ಚೇರನಿಗೆ ಕೊಟ್ಟರೆ ಅವನು ಸುವರ್ಣ, ವಸ್ತ್ರ ಹಾಗೂ ವಜ್ರವೈಢೂರ್ಯಗಳನ್ನು ಕೊಡುವನೆಂದನು. ಪಾಣಪತ್ತಿರನು ಮಧುರೆಯೊಡೆಯನ ಓಲೆಯೊಂದಿಗೆ ಚೇರನಲ್ಲಿಗೆ ಹೋದನು. ಭಕ್ತಿಯಿಂದ ಆದರಿಸಿದ ಚೇರನು ಪಾಣಪತ್ತಿರನಿಗೆ ಪರಮಾತ್ಮನು ಕೊಡುವಂತೆ ಹೇಳಿದ ವಸ್ತುಗಳ ಜೊತೆಗೆ ತನ್ನ ರಾಜ್ಯವನ್ನೂ ಸಾಮ್ರಾಜ್ಯಾಧಿಪತ್ಯವನ್ನೂ ಕೊಡಮಾಡಿದನು. ಪಾಣನು ಅವಾವೂ ತನಗೆ ಬೇಡವೆಂದು ಹೇಳಿ ಅವನ್ನು ಹಿಂದಕ್ಕೆ ಪಡೆಯುವಂತೆ ಚೇರನನ್ನು ಪ್ರಾರ್ಥಿಸಿದನು.

ಒಂದು ದಿವಸ ಚೇರನು ನಾಟ್ಯಮೂರ್ತಿಯು ನಾಟ್ಯವಾಡುವಾಗಿನ ಪಾದದಂದುಗೆಯ ಮಧುರಧ್ವನಿಯನ್ನು ಕೇಳದೆ ಆತ್ಮಹತ್ಯೆಮಾಡಿಕೊಳ್ಳಲು ಹೊರಟನು. ಆಗ ಆ ಮಧುರಧ್ವನಿಯು ಕೇಳಬಂದಿತು. ತಡವಾದದ್ದಕ್ಕೆ ಕಾರಣವೇನೆಂದು ಪರಮಾತ್ಮನನ್ನು ಚೇರನು ಕೇಳಲು, ಅದಕ್ಕೆ ಸ್ವಾಮಿಯು, ಚಿದಂಬರದಲ್ಲಿ ಆರೂರನು ಅದಾಗತಾನೆ ಹಾಡಿದ ಹಾಡನ್ನು ಕೇಳುತ್ತ ಮೈಮರೆತು ನಟನವಾಡುವುದನ್ನು ಮರೆತೆನು ಎಂದನು. ಚೇರನು ಆ ಕ್ಷಣವೇ ತಿಲ್ಲೈಗೆ ಹೋಗಿ ಆರೂರನನ್ನು ಭೇಟಿಮಾಡುವ ವಿಚಾರಮಾಡಿದನು. ತಿಲ್ಲೈಗೆ ಬಂದು ಪರಮಾತ್ಮನನ್ನು ಪೂಜಿಸಿದ ಮೇಲೆ ಚೇರನು ಪೊನ್‌ವಣ್ಣತ್ತಾನ್‌ತಾಟಿ ಎಂಬ ಕೃತಿ ರಚನೆ ಮಾಡಿದನು. ಅನಂತರ ಆರೂರನ ಬಳಿಗೆ ಹೋದನು. ಆರೂರನು ಚೇರನನ್ನು ಎಲ್ಲ ಪ್ರೀತಿ ಹಾಗೂ ಗೌರವಗಳಿಂದ ಸ್ವಾಗತಿಸಿದನು. ಅಲ್ಲಿ ಚೇರನು ತಿರುವಾರೂರ್ ಮುಮ್ಮಾಣಿಕ್ಕೋವೈ ಎಂಬ ಕೃತಿ ರಚನೆಮಾಡಿದನು. ಚೇರ ಹಾಗೂ ಆರೂರರು ಪಾಂಡ್ಯದೇಶದಲ್ಲಿನ ದೇವಾಲಯಗಳಿಗೆ ಯಾತ್ರೆ ಕೈಗೊಂಡರು. ಮಧುರೆಯಲ್ಲಿ ಪಾಂಡ್ಯರಾಜನ ಅಳಿಯನಾಗಿ ಚೋಳರಾಜನು ತಂಗಿರಲು, ತಮಿಳುನಾಡಿನ ಅರಸರಾದ ಚೇರ–ಚೋಳ–ಪಾಂಡ್ಯರು ಹಾಗೂ ಆರೂರನು ಅಲ್ಲಿ ಒಂದುಗೂಡಿದರು. ಮಧುರೆಯಿಂದ ಆರೂರ ಹಾಗೂ

ಚೇರರು ತಿರುವಾರೂರಿಗೆ ಹಿಂತಿರುಗಿದರು. ಚೇರರಾಜನು ಆರೂರನ ಜೊತೆಗೆ ಐಯಾರು ಹಾಗೂ ಕೊಂಕುನಾಡುಗಳ ಮೂಲಕ ತನ್ನ ರಾಜ್ಯಕ್ಕೆ ಪಯಣಿಸಿದನು. ಅವರು ಚೇರರಾಜ್ಯದ ಪವಿತ್ರ ಕ್ಷೇತ್ರಗಳ ಯಾತ್ರೆ ಕೈಗೊಂಡರು. ಕಾವೇರಿಯ ದಕ್ಷಿಣ ದಡದಲ್ಲಿರುವ ಎಲ್ಲ ದೇವಾಲಯಗಳಿಗೂ ಭೇಟಿಕೊಟ್ಟರು. ಅವರು ಕಾವೇರಿಯನ್ನು ದಾಟಲು ಹೊರಟಾಗ ಅದು ತುಂಬಿ ಹರಿಯುತ್ತಿತ್ತು. ಆರೂರನು ತಿರುವಯ್ಯಾರುವಿನ ಶಿವನನ್ನು ಹಾಗೂ ಕಾವೇರಿಮಾತೆಯನ್ನು ತಮಗೆ ನದಿಯನ್ನು ದಾಟಲು ಅನುಕೂಲವಾಗುವಂತೆ ಕೆಲಕಾಲ ಹರಿಯುವುದನ್ನು ನಿಲ್ಲಿಸುವಂತೆ ಪ್ರಾರ್ಥಿಸಿದನು. ನದಿ ಅವರಿಗೆ ದಾರಿ ಬಿಟ್ಟುಕೊಟ್ಟಿತು.

ಆರೂರನಿಗೆ ರಾಜವೈಭವದ ಸ್ವಾಗತ ನೀಡಲಾಯಿತು. ಕೆಲದಿವಸ ಚೇರನ ಅತಿಥಿಯಾಗಿ ತಂಗಿದ್ದ ಆರೂರನು, ತನ್ನ ದೇಶಕ್ಕೆ ಹಿಂತಿರುಗಲು ಇಚ್ಛಿಸಿದಾಗ ಚೇರನು ತನ್ನ ಗೌರವಕಾಣಿಕೆಗಳನ್ನು ತನ್ನ ಸೇವಕರ ಮೂಲಕ ಕಳುಹಿಸಿದನು. ಆದರೆ ಅದು ಕಳ್ಳರಿಂದ ತಿರುಮುರುಘಪೂಂಡಿಯಲ್ಲಿ ಅಪಹರಿಸಲ್ಪಟ್ಟಿತು. ಆರೂರನು ತಿರುವಾರೂರಿಗೆ ಹಿಂತಿರುಗಿದನು. ಆರೂರನು ತನ್ನ ಹಳೆಯ ಗೆಳೆಯನಾದ ಚೇರನನ್ನು ಮತ್ತೆ ನೋಡಲೆಂದು ಕೊಂಕುನಾಡಿನ ಮೂಲಕ ಚೇರನಾಡಿಗೆ ಯಾತ್ರೆ ಕೈಗೊಂಡನು. ತನ್ನ ಗೆಳೆಯನನ್ನು ಭೇಟಿಮಾಡಿದ ಮೇಲೆ ಆರೂರನು ತಿರುವಂಜಿಕ್ಕಳಂನಲ್ಲಿರುವ ಶಿವನನ್ನು ಅರ್ಚಿಸಲು ದೇವಾಲಯಕ್ಕೆ ಹೊರಟನು. ಅಷ್ಟರಲ್ಲಿ ಆರೂರನನ್ನು ಕೈಲಾಸಕ್ಕೆ ಕರೆದೊಯ್ಯಲೆಂದು ಅಲ್ಲಿಗೆ ಬಿಳಿಯ ಆನೆಯೊಂದು ಬಂದಿತು. ವಿಷಯ ತಿಳಿದ ಚೇರಮಾನನು ತನ್ನ ಕುದುರೆಯ ಕಿವಿಯಲ್ಲಿ ಪಂಚಾಕ್ಷರೀ ಮಂತ್ರವನ್ನು ಉಚ್ಚರಿಸಿ ಆರೂರನನ್ನು ಹಿಂಬಾಲಿಸಿದನು. ಆದರೆ, ಇವನ ಅಗಲಿಕೆಯನ್ನು ಸಹಿಸಲಾರದ ಇವನ ಅನುಯಾಯಿಗಳು ತಮ್ಮನ್ನು ತಾವೇ ಇರಿದುಕೊಂಡು ಪ್ರಾಣತ್ಯಾಗಮಾಡಿದರು. ಮಿತ್ರರಿಬ್ಬರೂ ಕೈಲಾಸದ ಶಿವನ ಸನ್ನಿಧಿಗೆ ಬರಲು ದ್ವಾರಪಾಲಕರು ಚೇರನನ್ನು ತಡೆದು ಆರೂರನನ್ನು ಒಳಗೆ ಬಿಟ್ಟರು. ಸುಂದರನು ಶಿವನನ್ನು ಸ್ತುತಿಸಿ, ಹೊರಗೆ ನಿಂತಿರುವ ಚೇರಮಾನನಿಗೂ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು. ಶಿವನ ಕೃಪೆಯಾಗಲು ಆರೂರನು ಹೊರಗೆ ನಿಂತಿದ್ದ ಚೇರಮಾನನನ್ನು ಒಳಗೆ ಕರೆದುಕೊಂಡು ಬಂದನು.

ಒಳಗೆ ಬಂದ ಚೇರಮಾನನನ್ನು ಶಿವನು 'ಕೈಲಾಸಕ್ಕೆ ನಮ್ಮಿಂದ ಕರೆಬರದೆ ಏಕೆ ಬಂದಿರಿ ?' ಎಂದು ಕೇಳಿದನು. 'ಪ್ರಾಣಮಿತ್ರನಾದ ಆರೂರನ ಅಗಲಿಕೆಯನ್ನು ಸಹಿಸಲಾರದೆಯೂ ನನ್ನಿಂದ ರಚಿತವಾದ 'ತಿರುವುಲಾಪ್ಪುರಂ' ಅನ್ನು ತಮಗೆ ಕೇಳಿಸಬೇಕೆಂಬ ಆಸೆಯಿಂದಲೂ ಅನುಜ್ಞೆಯಿಲ್ಲದೆ ಇಲ್ಲಿಗೆ ಬಂದೆನು. ನನ್ನನ್ನು ಕ್ಷಮಿಸಬೇಕು' ಎಂದು ಚೇರಮ ಶಿವನನ್ನು ಪ್ರಾರ್ಥಿಸಿದನು. ಶಿವನು ಚೇರಮನನ್ನು ಅನುಗ್ರಹಿಸಿ ಅವನು ರಚಿಸಿದ ಕೃತಿಯನ್ನು ಕೇಳಿ ಸಂತೋಷಿಸಿ ಅವನಿಗೆ ಗಣಪದವಿಯನ್ನು ಅನುಗ್ರಹಿಸಿದನು. ಚೇರಮನ ವಿಯೋಗದಿಂದ ಪ್ರಾಣಬಿಟ್ಟವರೆಲ್ಲರಿಗೂ ಶಿವಪದ ಪ್ರಾಪ್ತವಾಯಿತು.5

ಸುಂದರರ 'ತಿರುತ್ತೊಂಡತ್ತೊಗೈ'ಯಲ್ಲಿ ಚೇರಮನನ್ನು ನೆನೆಯುವಾಗ 'ಕಾರ್‌ಕೊಣ್ಡ ಕೊಡೈಕ್ಕಟಿಳಿಟ್ರು ಅಟಿಳಿವಾರ್ಕ್ಕುಂ ಅಡಿಯೇನ್' (= ದಾನ ಕೊಡುವುದರಲ್ಲಿ ಮೇಘವನ್ನು ಹೋಲುವ ಕಟಿಳಿಟ್ರು ಅಟಿಳಿವಾರಿಗೂ ಸೇವಕ) ಎಂದು ಹೇಳಲಾಗಿದೆ.6 ಪುರಾತನರಲ್ಲಿ ಮೂವತ್ತೇಳನೆಯವರು ಕಟಿಳಿಟ್ರಿಟಿವಾರ್ ನಾಯನಾರ್‌ರವರು. ನಂಬಿಯಾಂಡಾರ್ ನಂಬಿಯ 'ತಿರುತ್ತೊಂಡರ್ ತಿರುವಂದಾದಿ'ಯಲ್ಲಿ ಕಟಿಳಿಟ್ರಿಟಿವಾರ್‌ನು ಚೇರನೆಂದೂ ಅವನಿಗೆ ತೆನ್ನಾರ್ ಪಿರಾನ್ ಎಂಬ ಮತ್ತೊಂದು ಹೆಸರಿರುವುದಾಗಿಯೂ ಹೇಳಲಾಗಿದೆ. ನಂಬಿಯಾಂಡಾರ್ ನಂಬಿಯು ಈ ಭಕ್ತನ ಬದುಕಿಗೆ ಸಂಬಂಧಿಸಿದ ಎರಡು ಘಟನೆಗಳನ್ನು ಮಾತ್ರ ಹೇಳಿರುವನು :

---

5. ಪೆರಿಯಪುರಾಣಂನಲ್ಲಿ ಬರುವ ಚೇರಮಾನ್ ಪೆರುಮಾಳ್ ನಾಯನಾರನ ಕಥೆಯನ್ನು ಎಂ. ಎ. ದೊರೈ ರಂಗಸ್ವಾಮಿಯವರ 'The religion and philosophy of Tervaram' ಎಂಬ ಪುಸ್ತಕದ ಭಾಗ I ಪು. 83-86 ಮತ್ತು ಭಾಗ II ಪು. 1019-1021 ಹಾಗೂ ಪೆರಿಯಪುರಾಣಂನ ಕನ್ನಡ ಸಂಗ್ರಹಾನುವಾದವಾದ ಎಸ್. ಸಿ. ಚೆನ್ನವೀರಪ್ಪನವರ 'ಪುರಾತನ ಭಕ್ತವಿಲಾಸ'(1906)–ಈ ಕೃತಿಗಳನ್ನು ಆಧರಿಸಿ ಹೇಳಿರುವೆನು.

6. ನೋಡಿ : ತಿರುತ್ತೊಂಡತ್ತೊಗೈ (ಕನ್ನಡ ಗದ್ಯಾನುವಾದ–ಮೂಲದೊಂದಿಗೆ) ಡಿ. ಕೃಷ್ಣಮೂರ್ತಿ, ಜಿ. ಸುಂದರೇಶನ್, ಪು. 6

1. ಚೇರರಾಜನಿಗೆ ಸೌಳುಮಣ್ಣನ್ನು ಹೊತ್ತ ಅಗಸನು ಮೈಗೆಲ್ಲಾ ಪವಿತ್ರವಾದ ವಿಭೂತಿಯನ್ನು ಧರಿಸಿದಂತೆ ಕಾಣಲು ಅವನು ಆ ಅಗಸನನ್ನು ಭಕ್ತನೆಂದೇ ಭಾವಿಸಿ ನಮಸ್ಕರಿಸಿದನು. ಆಗ ಆ ಅಗಸನು ಅರಸನನ್ನು ತಡೆಯುತ್ತಾ ತಾನು ಚೇರನ ಸೇವಕನಾದ ಅಗಸನೆನ್ನುವನು. ಚೇರರಾಜನು ತಾನು ಶಿವಭಕ್ತರ ಸೇವಕನೆಂದು ಹೇಳುತ್ತ ಅವನನ್ನು ಬಿಡದೆ ಪೂಜಿಸುವನು.

2. ಶಿವನು ಆರೂರನಿಗೆ ಕೈಲಾಸವನ್ನು ಸೇರಲು ಆನೆಯೊಂದನ್ನು ಕೊಡಲು, ಈ ಚೇರನ ಕುದುರೆಯು ಆರೂರನ ಆನೆಯನ್ನು ಹಿಂದೆ ಹಾಕಿತು 7

ನಂಬಿಯಾಂಡಾರ್‌ನಂಬಿಯು ತಾನು ಮನ್ಮಥನನ್ನು ಗೆದ್ದಂತಹ ಶೂರ ಭಕ್ತನಾದ ಚೇರಮಾನ ಸೇವಕನಾಗುವ ಕೃಪೆಯಾಗಲೆಂದು ಪ್ರಾರ್ಥಿಸುವನು. ಮತ್ತೊಂದೆಡೆಯಲ್ಲಿ ಅವನು ಆನೆ ಹಾಗೂ ಕುದುರೆಯಲ್ಲಿ ಸಾಗಿದ ಆರೂರ ಮತ್ತು ವಿಲ್ಲವರ್ (ಚೇರ)ರವರು ಸತ್‌ಪಥದಲ್ಲಿ ನಡೆದುದನ್ನು ಉಲ್ಲೇಖಿಸಿರುವನು.8

'ತಿರುತ್ತೊಂಡತ್ತೊಗೈ'ಯಲ್ಲಿ ಚೇರಮನ ಬದುಕಿನ ವಿವರಗಳೇನೂ ನಿರೂಪಣೆಗೊಂಡಿಲ್ಲ. ಮೇಲೆ ತಿಳಿಸಿದ ಸ್ತುತಿಪರವಾದ ಒಂದು ಸಾಲುಮಾತ್ರ ಅಲ್ಲಿ ಬರುತ್ತದೆ. ನಂಬಿಯಾಂಡಾರ್ ನಂಬಿಯು ಹಿಂದಣ ಚೇರ ರಾಜನು ರಾಜ್ಯ ತ್ಯಜಿಸಿದ ಬಗೆಗೆ ಏನನ್ನೂ ತಿಳಿಸಿಲ್ಲ. ಪರಂಪರೆಯಂತೆ, ಪೆರುಮಾಳರೆಂದು ಕರೆಯಲ್ಪಡುವ ಚೇರರಾಜರು ನಿಶ್ಚಿತ ಕಾಲದವರೆವಿಗೆ ರಾಜ್ಯವಾಳಿ ತಮ್ಮ ಅಧಿಕಾರಾವಧಿಯ ಕೊನೆಯಲ್ಲಿ ಅಧಿಕಾರವನ್ನು ತ್ಯಜಿಸುತ್ತಿದ್ದರು. ಚೇರಮಾನನೂ ಸಹಾ ತನ್ನ ಹಿಂದಣವರಂತೆ, ಆದರೆ, ಭಿನ್ನ ಸನ್ನಿವೇಶದಲ್ಲಿ ಸಿಂಹಾಸನವನ್ನು ತ್ಯಜಿಸಿರಬಹುದು. ಶೇಕ್ಕಿಳಾರನು ಪರಂಪರೆಯ ಹಿನ್ನೆಲೆಯಲ್ಲಿ ಚೇರಮಾನ್ ಪೆರುಮಾಳನ ಹಿಂದಣವರ ರಾಜ್ಯತ್ಯಾಗದ ಬಗೆಗೆ ಪ್ರಸ್ತಾಪಿಸಿರಬಹುದು.9

---

7. ನೋಡಿ : The religion and philosopy of Tevaram II : M. A. Dorai Rangaswamy (1959), pp 1019.
8. ಅದೇ, ಪು. 1021
9. ಅದೇ, ಪು. 1021

2

ಶಿವನ ಪಾದಗಳ ನೂಪುರಧ್ವನಿಯನ್ನು ಚೇರಮಾನನು ನಿತ್ಯವೂ ಕೇಳುತ್ತಿದ್ದ ನೆಂಬ ಕಥೆಯ ಉಲ್ಲೇಖವನ್ನು ನಂಬಿಯಾಂಡಾರ್ ನಂಬಿಯು ಮಾಡಿಲ್ಲ. ಮಾಣಿಕ್ಯವಾಚಕರು ತಮ್ಮ 'ತಿರುವಾಚಕಂ'ನಲ್ಲಿ ನಟರಾಜನ ಪಾದ ದಂದುಗೆಯ ಧ್ವನಿ ಕೇಳಿದ ಬಗೆಗೆ ಹೇಳಿರುವರು. ನಂಬಿಯಾಂಡಾರ್ ನಂಬಿಯು ವರ್ಣಿಸಿರುವಂತೆ ಚೇರಮಾನನು ಮನ್ಮಥನನ್ನು ಗೆದ್ದವನು. ಇದರಿಂದ ಚೇರ ಮಾನನು ಮದುವೆಯಾಗಿರಲಿಲ್ಲವೆನ್ನುವುದು ಸ್ಪಷ್ಟವಾಗುತ್ತದೆ.

ಚೇರಮಾನನು ರಚಿಸಿದ ಕೃತಿಗಳ ಬಗೆಗೆ ಹೆಚ್ಚಿನ ವಿವರಗಳನ್ನು ಹನ್ನೊಂದ ನೆಯ ತಿರುಮುರೈ10ನಿಂದ ಪಡೆಯಬಹುದು. ಚೇರಮಾನನು ಕೈಲಾಸಕ್ಕೆ ಆಕಾಶದ ಮೂಲಕ ಹೋದನೆಂದು ಶೇಕ್ಕಿಳಾರನು ಹೇಳುವನು. ಆದರೆ ತಂಜಾ ವೂರಿನ ರಾಜರಾಜೇಶ್ವರಂ ದೇವಾಲಯದಲ್ಲಿ ಪತ್ತೆಹಚ್ಚಲಾಗಿರುವ ವರ್ಣಚಿತ್ರ ಗಳಲ್ಲಿ ಗಡ್ಡಧಾರಿಯೊಬ್ಬನು ಆನೆಯ ಮೇಲೆ ಕುಳಿತು ಕೈಯಲ್ಲಿ 'ತಾಳ' ಅಥವಾ ಚಿನ್ನ ಹಿಡಿದಿರುವ ಚಿತ್ರವೊಂದಿದೆ. ಇದು ಆರೂರನೇ ಆಗಿದ್ದು 'ತಾನೇನ್ನ ಮುನ್‌ಪಡೈತ್ತಾನ್' ಎಂದು ಪ್ರಾರಂಭವಾಗುವ ಹಾಡನ್ನು ಹಾಡುತ್ತಿರುವನು.

---

10. ತಿರುಮುರೈಗಳು ಹನ್ನೆರಡು. "ಮಧುರಾಂತಕ ಉತ್ತಮಚೋಳನ ಅನಂತರದಲ್ಲಿ ಪಟ್ಟಕ್ಕೆ ಬಂದ ಅರುಳ್‌ಮೊಳಿ ಎಂಬ ಮೊದಲನೇ ರಾಜ ರಾಜನು (ಕ್ರಿ. ಶ. 984-1013) ಕೇಳಿಕೊಂಡಂತೆ ತಿರುನಾರೈಯೂರ್ ನಂಬಿಯು ಶಿವಪರಮಾತ್ಮನು ತನ್ನ ಬಾಯಿಂದಲೇ ಅನುಗ್ರಹಿಸಿದ ತಿರುಮುಗ ಪಾಶುರವನ್ನೂ, ಕಾರೈಕಾಲ್ ಅಮ್ಮೆ, ಐಯಡಿಗಳ್, ಕಾಡಲರ್‌ಕೋನ್ ಎಂಬ ಎರಡನೇ ಮಹೇಂದ್ರವರ್ಮ, ಪಟ್ಟಿನತ್ತಾರ್, ನಕ್ಕೀರರ್, ಮೊದಲನೇ ಚೇರಮಾನ್ ಪೆರುಮಾಳ್, ಕರವೂರ್ ತೇವರ್-ಇವರು ಅನುಗ್ರಹಿಸಿದ ಹಾಡುಗಳನ್ನು ಸೇರಿಸಿ ಈ ಸಂಕಲನ ವನ್ನು ಹನ್ನೊಂದನೇ ತಿರುಮುರೈಯೆಂದು ಕರೆದನು. ಈ ಹನ್ನೊಂದು ತಿರುಮುರೈಗಳನ್ನೂ ಮೊದಲನೇ ರಾಜರಾಜನು ತಾಮ್ರಫಲಕಗಳಲ್ಲಿ ಬರೆಸಿ ತಿರುವಾರೂರ್ ತ್ಯಾಗೇಶರ ಸನ್ನಿಧಿಯಲ್ಲಿಟ್ಟನು."

ನೋಡಿ: ಪೆರಿಯಪುರಾಣಂ ಭಾಗ ೧ (ತಮಿಳು ಮೂಲದೊಡನೆ ಕನ್ನಡಾನುವಾದ) ಡಾ॥ ಎ. ಶಂಕರ ಕೆದಿಲಾಯ (1974) ಪು. 19

ಅವನ ಪಕ್ಕದಲ್ಲಿ ಕುದುರೆಯೊಂದನ್ನು ಏರಿ ನಡೆಸುತ್ತಿರುವ ಚೇರಮಾನನಿರುವನು. ಆರೂರನಿಗೆ ಎದುರಾಗಿ ಗಡ್ಡ ಹಾಗೂ ಆಭರಣಗಳನ್ನು ಧರಿಸಿದ ಚೇರಮಾನನು ಕುದುರೆಯನ್ನು ಹತ್ತಿ ನಡೆಸುತ್ತಿರುವನು. ಇವನ ದಟ್ಟವಾದ ಕೂದಲು ಗಾಳಿಗೆ ಹಾರಾಡುತ್ತಿದ್ದರೆ, ಆರೂರನದು ಬಲಗಡೆಗೆ ಗಂಟುಕಟ್ಟಿದಂತಿದೆ. ಇವರ ನಡುವೆ ಮೀನುಗಳಿರುವ ಅಲೆಗಳು ಕಂಡುಬರುತ್ತವೆ. ಇದು ಬಹುಶಃ ಅವರು ಸಮುದ್ರ ಮಾರ್ಗದಲ್ಲಿ ನಡೆದರೆಂಬುದನ್ನು ಸೂಚಿಸಬಹುದು. ಬಹುಶಃ ಅವರು ಸಮುದ್ರ ಮಾರ್ಗದಲ್ಲಿ ಕ್ರಮಿಸಿದ್ದರೂ ಅದೇ ವೇಳೆಯಲ್ಲಿ ಅವರು ಆಕಾಶದಲ್ಲೂ ಪಯಣಿಸಿರಬಹುದು. ರಾಜರಾಜೇಶ್ವರಂ ದೇವಾಲಯದ ವರ್ಣಚಿತ್ರಗಳಲ್ಲಿ, ಈ ಭಕ್ತರುಗಳನ್ನು ಕೈಲಾಸದಲ್ಲಿ ಶಿವಗಣಗಳು ಹೇಗೆ ಸ್ವಾಗತಿಸಿದರೆಂಬುದನ್ನು ಶೇಕ್ಕಿಳಾರ್ ನಿರೂಪಿಸುವ ರೀತಿಯಲ್ಲಿಯೇ ಚಿತ್ರಿಸಲಾಗಿದೆ.11

'ತಿರುವಿಸೈಪ್ಪಾ'ದ ಕರ್ತೃವಾದ ಪೂನ್‌ತುರುಟ್ಟಿ ನಂಪಿ ಕಾಡವ ನಂಪಿಯು ಆರೂರ ಹಾಗೂ ಚೇರಮಾನನು ಬಿಳಿಯಾನೆಯನ್ನೇರಿ ಸ್ವಶರೀರದೊಂದಿಗೆ ಕೈಲಾಸಕ್ಕೆ ಹೋದರೆಂದು ಹೇಳುವನು. ಕುತೂಹಲಕಾರಿಯಾದ ಅಂಶವೆಂದರೆ, ದಾರಾಶುರಮ್ ಶಿಲ್ಪಗಳು ಚೇರಮಾನ್ ಪೆರುಮಾಳ್ ಕಥೆಯನ್ನು ಪ್ರತಿನಿಧಿಸುತ್ತಿದ್ದು ಅದರಲ್ಲಿ ಒಂದರ ಹಿಂದೆ ಮತ್ತೊಂದು ಇರುವ ಆನೆಗಳಲ್ಲಿ ಇಬ್ಬರು ಕುಳಿತಿರುವುದನ್ನು ನೋಡಿ, ಅವರು ಆರೂರ ಹಾಗೂ ಚೇರಮಾನರೆಂದು ಕೆಲವರು ಊಹಿಸುವರು. ಪ್ರೊ॥ ಎಂ. ಎ. ದೊರೈ ರಂಗಸ್ವಾಮಿಯವರು ಅದನ್ನು ಅಲ್ಲಗಳೆಯುತ್ತಾ, ಮೊದಲ ಆನೆಯಲ್ಲಿ ಸಾಗಿರುವ ವ್ಯಕ್ತಿಯು ಬಲಗೈಯಲ್ಲಿ ರಾಜಛತ್ರವನ್ನು ಹೊಂದಿದ್ದು ತನ್ನ ಮುಖವನ್ನು ಎರಡನೆ ಆನೆಯಲ್ಲಿ ಕುಳಿತ ವ್ಯಕ್ತಿಯ ಕಡೆಗೆ ತಿರುಗಿಸಿದ್ದು ಅದರಲ್ಲಿ ಕೃತಜ್ಞತೆ ಹಾಗೂ ಗೌರವ ಭಾವನೆಗಳನ್ನು ವ್ಯಕ್ತಪಡಿಸುತ್ತಿರುವನು. ಇದು ಎರಡನೆಯ ಆನೆಯಲ್ಲಿ ಕುಳಿತ ವ್ಯಕ್ತಿ ಆರೂರನಿರಬಹುದೆಂಬ ಸಂದೇಹವನ್ನು ತರುತ್ತಿದೆ ಎಂದಿರುವರು.12

---

11. The religiin and philosophy of Tevaram, II, (1959) pp 1022
12. ಅದೇ, ಪು. 1022-1023

ಶೇಕ್ಕಿಳಾರನು ಚೇರಮನಿಗಿರುವ 'ಕಟಿಱಿಱ್ಱಿಱಿವಾರ್ ನಾಯನಾರ್' ಎಂಬ ಹೆಸರಿನ ಬಗೆಗೆ ವಿವರಣೆ ನೀಡುತ್ತಾ, ಶಿವನಿಂದ ವರಪಡೆದ ಈ ಅರಸು ಪ್ರಾಣಿ, ಮನುಷ್ಯ ಮತ್ತು ಪಕ್ಷಿಗಳ ಭಾವನೆಗಳನ್ನೆಲ್ಲಾ, ವಿಶೇಷವಾಗಿ, ಅವುಗಳ ಕಷ್ಟಗಳನ್ನು ಹಾಗೂ ರಾಜ್ಯದಲ್ಲಿನ ಕುಂದುಕೊರತೆಗಳನ್ನು ತಿಳಿಯುವ ಸಾಮರ್ಥ್ಯ ಹೊಂದಿರುವನು ಎನ್ನುವನು. ಈ ಹೆಸರಿನ ವಿಶೇಷತೆಯನ್ನು ಪ್ರೊ॥ ದೊರೈ ರಂಗಸ್ವಾಮಿಯವರು ಹೀಗೆ ವಿವರಿಸುವರು "... The word 'Kalaru' as found in the old phrase 'Kalar retirmarai' means according to thc Tamil lexicon, admonition, expostulation or criticism at once, kind and severe. Therefore, the title Kalarirrari-var will explain the greatness of the king ruling according to Tirukkural, with the noble quality of welcoming and seeing through destrutive criticism against his rule."[13]

ಸಂಸ್ಕೃತ

ತಮಿಳುನಾಡಿನ 63 ಮಂದಿ ಶೈವಭಕ್ತರನ್ನು ಕುರಿತು ಅಗಸ್ತ್ಯ ಶಿವಭಕ್ತ ವಿಲಾಸ,[14] ಉಪಮನ್ಯು ಶಿವಭಕ್ತಿವಿಲಾಸ[15] ಹಾಗೂ ಶಿವರಹಸ್ಯ[16] ಎಂಬ ಕೃತಿಗಳು ಸಂಸ್ಕೃತದಲ್ಲಿ ಬಂದಿವೆ. 'ಶಿವರಹಸ್ಯ'ದಲ್ಲಿ ಬರುವ ಚೇರಮನ ಕಥೆಯನ್ನು ಗಮನಿಸಿದಾಗ ಶೇಕ್ಕಿಳಾರನ 'ಪೆರಿಯಪುರಾಣಂ' ಅಲ್ಲಿ ವಿಶೇಷವಾಗಿ

13. ಅದೇ, ಪು. 1023
14. ಇದು ಗ್ರಂಥಲಿಪಿಯಲ್ಲಿ 1909ರಲ್ಲಿ ಪ್ರಕಟವಾಗಿದೆ (ನೋಡಿ : New catalogus catalogorum vol. I (R.E)ed by : Dr. V. Raghavan (1969)Madras university, Madras, p. 21)
15. ಇದು 1931ರಲ್ಲಿ ಮದ್ರಾಸಿನ ಲಾ ಜರ್ನಲ್ ಪ್ರೆಸ್‌ನಲ್ಲಿ ಮುದ್ರಣಗೊಂಡಿದೆ. ಇದು ತಮಿಳು ಮೂಲವನ್ನು (ಪೆರಿಯಪುರಾಣವನ್ನು) ಆಧರಿಸಿದೆಯೆಂದು ಡಾ॥ ವಿ. ರಾಘವನ್ ರವರು ಅಭಿಪ್ರಾಯ ಪಡುವರು.

ಪ್ರಭಾವ ಬೀರಿರುವಂತೆ ಕಂಡುಬರುತ್ತದೆ. ಮಹೋದಯ ಪಟ್ಟಣದ ಮಹಾ ಗೋದನೆಂಬ ಚೋಳರಾಜನು ವಾಂಛೀಪುರೇಶನಿಗೆ ಪ್ರಾಕಾರ, ಗೋಪುರ, ಮಂಟಪಗಳನ್ನೂ, ಹೂ ಹಣ್ಣಿನ ಮರಗಳ ತೋಟಗಳನ್ನೂ, ಉದ್ಯಾನ ವನಗಳನ್ನೂ, ರಥ, ವಾಹನ ಮೊದಲಾದವುಗಳನ್ನೂ ಮಾಡಿಸಿ ಉತ್ಸವವನ್ನು ನಡೆಸುತ್ತಾ ಶೈವರ ಪೂಜೆ ಮಾಡುತ್ತ ವಾಂಛೀಪುರದಲ್ಲಿ ಅನೇಕ ದಿವಸಗಳನ್ನು ಕಳೆದನು. ದೇವಸ್ಥಾನದ ಶುದ್ಧಿಗೆ ನೀರು ತರುವುದು, ಸಗಣಿಯಿಂದ ದೇವಾಲಯವನ್ನು ಸಾರಿಸುವುದು, ದೀಪಗಳನ್ನು ಬೆಳಗಿಸುವುದು ಇವೇ ಮೊದಲಾದ ಸೇವೆಗಳನ್ನು ಮಾಡುತ್ತ ಏಕಾಂತದಲ್ಲಿ ಶಿವನನ್ನು ಪೂಜಿಸುತ್ತ ನೃತ್ಯ, ಗಾನ, ವಾದ್ಯಗಳಿಂದ ಮಹಾದೇವನಿಗೆ ಪೂಜೆಯನ್ನು ಸಮರ್ಪಿಸು ತ್ತಿದ್ದನು. ಆ ಶಿವಕ್ಷೇತ್ರದಲ್ಲಿ ಮಹಾಗೋದರಾಜನು ಸದಾ ಶಿವನಾಮ ಸ್ಮರಣೆ ಮಾಡುತ್ತ ಕೆಲಕಾಲ ತಂಗಿದ್ದನು(ಅ.57 ಪು. 1–17). ಹೀಗೆ ಮಹಾಗೋದನ (ಚೇರಮನ) ಕಥೆ 'ಶಿವರಹಸ್ಯ'ದಲ್ಲಿ ಆರಂಭಗೊಳ್ಳುತ್ತದೆ.

ಮಹಾಗೋದನು ರಾಜ್ಯವನ್ನು ತ್ಯಜಿಸಿ ತಪಸ್ಸು ಮಾಡಲು ಅರಣ್ಯಕ್ಕೆ ಹೊರಡುವುದು, ಮಂತ್ರಿಗಳು ರಾಜನಲ್ಲಿಗೆ ಬಂದು ಮತ್ತೆ ರಾಜ್ಯಭಾರವನ್ನು ವಹಿಸಿಕೊಳ್ಳಬೇಕೆಂದು ಪ್ರಾರ್ಥಿಸುವುದು, ಶಿವನ ಆದೇಶದಂತೆ ರಾಜನು ರಾಜ್ಯಭಾರ ಮಾಡಲು ಮತ್ತೆ ಮಹೋದಯ ಪಟ್ಟಣಕ್ಕೆ ಹಿಂತಿರುಗುವುದು, ಭಸ್ಮಲೇಪಿತ ಶರೀರನಾದ ಅಗಸನನ್ನು ಮಹಾಶಿವಭಕ್ತನೆಂದು ಭಾವಿಸಿ ವಂದಿಸು ವುದು, ಭದ್ರನೆಂಬ ಬಡಸಂಗೀತಗಾರನು ದ್ರವ್ಯಾಪೇಕ್ಷೆಯಿಂದ ಮಧುರಾಪಟ್ಟ ಣಕ್ಕೆ ಬಂದು ದೇವರ ಸನ್ನಿಧಿಯಲ್ಲಿ ಹಾಡುವುದು, ಭದ್ರನಿಗೆ ಹಾಲಾಸ್ಯೇಶ್ವರ

---

(ನೋಡಿ : New Catalogus Catalogorum Vol. II ed by: Dr. V. Raghavan(1966) Madras university, Madras, p. 368)

16. 'ಶಿವರಹಸ್ಯ'ವು ಜಯಚಾಮರಾಜೇಂದ್ರ ಗ್ರಂಥಮಾಲೆಯಲ್ಲಿ ಪ್ರಕಟ ವಾಗಿದ್ದು, ಚೇರಮನ ಕಥೆಯು ಸಂಪುಟ 24ರಲ್ಲಿ ಬಂದಿದೆ. 1951ರಲ್ಲಿ ಹೊರಬಂದ ಈ ಕೃತಿ ಮೂಲದೊಂದಿಗೆ ಅನುವಾದವನ್ನೂ ಹೊಂದಿದೆ. ಇದರ ಅನುವಾದಕರು ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರಿ.

ಸ್ವಾಮಿಯು ಕನಸಿನಲ್ಲಿ ದರ್ಶನವಿತ್ತು ಚೋಲರಾಜನನ್ನು ಕಾಣುವಂತೆ ಹೇಳಿ ಓಲೆಯೊಂದನ್ನು ಬರೆದುಕೊಡುವುದು, ಮಹಾಗೋದನು ಶಿವನಿಂದ ಬಂದ ಓಲೆಯನ್ನು ಓದಿ ಸಂತೋಷಗೊಂಡು, ತನ್ನ ಸಮಸ್ತ ಐಶ್ವರ್ಯವನ್ನೂ ಭೂಮಂಡಲವನ್ನೂ ಭದ್ರನಿಗೆ ಕೊಡಹೊರಡುವುದು, ಭದ್ರನು ದೇಶಕೋಶಗಳು ತನಗೆ ಬೇಕಿಲ್ಲವೆಂದು ಹೇಳಿ ಬೇಕಾದಷ್ಟು ಹಣವನ್ನು ರಾಜನಿಂದ ಪಡೆದು ಮಧುರಾಪಟ್ಟಣಕ್ಕೆ ಹಿಂದಿರುಗುವುದು, ಶಂಕರನ ಪೂಜಾನಂತರ ನಿತ್ಯವೂ ಕೇಳುತ್ತಿದ್ದ ತಾಂಡವೇಶ್ವರನ ಕಾಲಗೆಜ್ಜೆಯ ಧ್ವನಿ ಒಮ್ಮೆ ಕೇಳಿಬರದಿರಲು ಕತ್ತಿಯಿಂದ ತನ್ನ ಎದೆಯನ್ನು ಸೀಳಿಕೊಳ್ಳಲು ಹೊರಟಾಗ 'ಸುಂದರೇಶ್ವರನ ಶ್ರೀಗಾನವನ್ನು ಬಹಳ ಕಾಲದಿಂದ ಕೇಳುತ್ತಾ ಇದ್ದ ನನ್ನಿಂದ ನಾಟ್ಯವಾಡುವುದಕ್ಕೆ ಕೊಂಚ ವಿಳಂಬವಾಯಿತು' ಎಂಬ ಶಿವನ ಅಶರೀರವಾಣಿ ಕೇಳಿ ಬರುವುದು, ಹೇಮಸಭಾಪತಿಯಲ್ಲಿಗೆ (ಚಿದಂಬರಕ್ಕೆ) ಪಯಣಿಸಿ ಅಲ್ಲಿ ಅನೇಕ ದಿವಸಗಳನ್ನು ಕಳೆಯುವುದು, ಒಮ್ಮೆ ಕನಸಿನಲ್ಲಿ ನಟರಾಜನು ಕಾಣಿಸಿಕೊಂಡು ಸೌಮ್ಯೇಶ್ವರನ ಸಂಗೀತವನ್ನು ಕೇಳಿ ನಾನು ನಿನಗೆ ಕಾಲವಿಳಂಬ ಮಾಡಿದನು ಎಂದು ಹೇಳುವುದು, ಮಹಾಗೋದನು ಸುಂದರೇಶ್ವರನನ್ನು ನೋಡುವ ಉತ್ಸಾಹದಿಂದ ಅಲ್ಲಿಂದ ಕಮಲಾಲಯಕ್ಷೇತ್ರಕ್ಕೆ ಹೊರಡುವುದು, ಸುಂದರೇಶ್ವರನನ್ನು ಕಂಡು ಆಲಿಂಗನ ಮಾಡಿಕೊಂಡು ಅವನ ಆತಿಥ್ಯವನ್ನು ಸ್ವೀಕರಿಸಿ ಕಮಲಾಲಯ ಕ್ಷೇತ್ರದಲ್ಲಿ ಬಹುಕಾಲ ವಾಸಮಾಡಿದುದು, ಮುಂದೆ ಅವರೀರ್ವರೂ ಪಾಂಡ್ಯದೇಶದಲ್ಲಿರುವ ಶಿವದೇವಾಲಯಗಳನ್ನೆಲ್ಲಾ ಸಂದರ್ಶಿಸಿ ಹಾಲಾಸ್ಯಕ್ಷೇತ್ರಕ್ಕೆ ಬರುವುದು, ಅಲ್ಲಿಂದ ಪಯಣಿಸುತ್ತ ದಾರಿಯಲ್ಲಿ ಸಿಕ್ಕಿದ ಶಿವಸ್ಥಾನಗಳನ್ನೆಲ್ಲಾ ನೋಡಿ ಕಾವೇರೀ ನದಿಯನ್ನು ದಾಟಿ ಪಂಚನದೀ ದಡದಲ್ಲಿನ ಶಿವನ ದರ್ಶನ ಮಾಡಿ ಮಹೋದಯಪುರಕ್ಕೆ ಬಂದು ಬಗೆಬಗೆಯ ಆಟಗಳನ್ನಾಡುತ್ತಾ ಬಹುಕಾಲ ವಾಸಮಾಡಿದುದು (ಅ. ೫೭ ಪ ೧೮–೩೯ ; ಅ.೫೮ ಪ.೧-೩೧)—ಹೀಗೆ 'ಶಿವರಹಸ್ಯ'ದಲ್ಲಿನ ಚೇರಮನ ಕಥೆ ಶೇಕ್ಕಿಳಾರನನ್ನು ಉದ್ದಕ್ಕೂ ಅನುಸರಿಸಿಕೊಂಡು ಬರುತ್ತದೆ.

'ಶಿವರಹಸ್ಯ'ದಲ್ಲಿ ಬರುವ ಚೇರಮನ ಕಥೆಯ ಅಂತ್ಯಭಾಗ ಶೇಕ್ಕಿಳಾರನ ನಿರೂಪಣೆಗಿಂತ ಭಿನ್ನವಾಗುತ್ತದೆ. ಮಹೋದಯಪುರದಲ್ಲಿ ಚೇರಮನ ಅತಿಥಿ

ಯಾಗಿದ್ದ ಸುಂದರೇಶ ಕಮಲಾಲಯ ಕ್ಷೇತ್ರಕ್ಕೆ ಹೊರಡಲು ತೀರ್ಮಾನಿಸಿದಾಗ ಅವನಿಗೆ ಮಹಾಗೋದನು ಬೇಕಾದಷ್ಟು ಹಣವನ್ನು ಚಿತ್ರವಿಚಿತ್ರ ಬಟ್ಟೆಗಳನ್ನೂ ಅಮೂಲ್ಯವಾದ ಆಭರಣಗಳನ್ನೂ ಕೊಟ್ಟು ಅವನ ಜೊತೆ ತಾನೂ ಬಹುದೂರ ಹೋಗಿ ಅವನನ್ನು ಕಳುಹಿಸಿಬರುವನು. ಹೀಗೆ ಆ ಚೋಲರಾಜನಾದ ಮಹಾಗೋದನು ಶಿವಭಕ್ತವರ್ಯನಾಗಿ ಶಿವಕ್ಷೇತ್ರಗಳಲ್ಲಿ ಬಹುದಿವಸ ವಾಸಮಾಡಿ, ಅದರ ಬಲದಿಂದ, ಏಕಚ್ಛತ್ರಾಧಿಪತಿಯೆನಿಸಿ ಸಕಲ ಭೂಮಂಡಲವನ್ನೂ ಕಾಪಾಡಿ ಕೀರ್ತಿಶೇಷನಾದನು–ಎಂದು ಕಥೆ ಮುಗಿಯುತ್ತದೆ. 'ಶಿವರಹಸ್ಯ'ದಲ್ಲಿ ಚೇರಮನನ್ನು 'ಮಹಾಗೋದ'ನೆಂಬ ಹೆಸರಿನಿಂದ ಕರೆಯಲಾಗಿದೆ. ಸಕಲ ಸಂಪತ್ತುಗಳಿಗೂ ಆಶ್ರಯವಾಗಿರುವ ಕೇರಳ ದೇಶವು ಚೋಲರಾಜನಿಂದ ಕಾಪಾಡಲ್ಪಟ್ಟಿತು. ಆ ಕೇರಳದೇಶದಲ್ಲಿ ಚೋಲರಾಜನಾದ ಮಹಾಗೋದನು ಮಹೋದಯವೆಂಬ ಪಟ್ಟಣವನ್ನು ಆಳುತ್ತಿದ್ದನು ಎಂದು ಹೇಳಲಾಗಿದೆ (೫೭ ಪ. ೧–೩). ಮಹೋದಯ ಪಟ್ಟಣದಲ್ಲಿ ಶ್ರೀವಾಂಛವೆಂಬ ಶೈವಕ್ಷೇತ್ರವು ಪ್ರಸಿದ್ಧವಿದ್ದು ಅಲ್ಲಿಯ ಶಿವನ ಸೇವೆಯನ್ನು ಕೆಲಕಾಲ ಮಹಾಗೋದನು ಮಾಡಿದಂತೆ ಕಥೆಯು ಪ್ರಾರಂಭದಲ್ಲಿ ಬರುತ್ತದೆ(ಅ. ೫೭. ಪ ೪-೧೭). ಮುಂದಣ ಕಥಾಭಾಗ ಪೆರಿಯಪುರಾಣವನ್ನು ಅನುಸರಿಸುತ್ತದೆ. ಕಥೆಯ ಕೊನೆಯಲ್ಲಿ ಸ್ವಲ್ಪ ಬದಲಾವಣೆ ಕಾಣಬರುತ್ತದೆ. ಸುಂದರೇಶ ಕೈಲಾಸದಿಂದ ಬಂದ ಐರಾವತವನ್ನೇರಿ ಕೈಲಾಸಕ್ಕೆ ಹೋಗುವುದಾಗಲೀ, ಆ ವಿಷಯ ತಿಳಿದ ಚೇರಮನು ಸುಂದರೇಶನನ್ನು ಹಿಂಬಾಲಿಸಿಕೊಂಡು ಹೊರಟು ಆಕಾಶದಲ್ಲಿ ಅವನನ್ನು ಸಂಧಿಸುವುದಾಗಲೀ, ಮಿತ್ರರಿಬ್ಬರೂ ಕೈಲಾಸಕ್ಕೆ ಜೊತೆಗೂಡಿ ಬರುವುದಾಗಲೀ, ಗಣಪದವಿಯನ್ನು ಸುಂದರೇಶನು ತನ್ನ ಗೆಳೆಯನಿಗೆ ಶಿವನಿಂದ ಕೊಡಿಸಿ ಅವನು ರಚಿಸಿದ ಹಾಡುಗಳನ್ನು ಶಿವನಿಗೆ ಕೇಳಿಸುವುದೇ ಆಗಲಿ 'ಶಿವರಹಸ್ಯ'ದಲ್ಲಿ ಬರುವುದಿಲ್ಲ.

## ತೆಲುಗು : ಪಾಲ್ಕುರಿಕೆ ಸೋಮನಾಥ

ಪಾಲ್ಕುರಿಕೆ ಸೋಮನಾಥನು ಚೇರಮನ ಬದುಕಿಗೆ ಸಂಬಂಧಿಸಿದ ಘಟನೆಗಳನ್ನು ತನ್ನ ಎರಡು ಕೃತಿಗಳಲ್ಲಿ (ಬಸವ ಪುರಾಣಮು, ಪಂಡಿತಾರಾಧ್ಯ ಚರಿತ್ರ) ಪ್ರಸ್ತಾಪಿಸಿರುವನು. ಮೊದಲನೆಯದರಲ್ಲಿ ವಿವರಗಳು ಸೂಚ್ಯವಾಗಿ

ಬಂದರೆ, ಎರಡನೆಯದರಲ್ಲಿ ಸ್ವಲ್ಪ ವಿಸ್ತಾರವಾಗಿ ಬಂದಿದೆ. ಚೇರಮನು ಶಿವನ ದಳವಾಯಿಯೆಂದೂ (ಆ. ೨ ಸಾ. ೬೭೬); ಅರಸರಿಗೆ ರಾಜ್ಯಾಂತ ನರಕವೆಂಬುದು ಸತ್ಯವಿದ್ದರೂ ಚೇರಮರಾಯ, ಚೋಳಮಹೇಶರು ಮುಕ್ತಿಯನ್ನು ಪಡೆದರೆಂದೂ(ಆ. ೫ ಸಾ. ೬೪೯–೭೭೦); ಶಿವನು ಚೇರಮನಿಗೆ ತನ್ನ ಗದ್ದುಗೆಯನ್ನು ಕೊಡುವನೆಂದೂ (ಆ. ೬ ಸಾ. ೧೯೧೦) 'ಬಸವಪುರಾಣಮು'ವಿನಲ್ಲಿ ಹೇಳಲಾಗಿದೆ. 'ಪಂಡಿತಾರಾಧ್ಯ ಚರಿತ್ರ'ದಲ್ಲಿ ಚೇರಮನ ಕಥೆಯನ್ನು ಮಹಿಮ ಪ್ರಕರಣದ ಪಿರಿಯನಂಗೆಯ ಕಥೆಯಲ್ಲಿ ಕವಿಯು ಹೇಳಿರುವನು. ನಂಬಿಯಣ್ಣನ ಕಥೆಯಲ್ಲಿ ಚೇರಮನ ಕಥೆಯೂ ಸಾಮಾನ್ಯವಾಗಿ ಸೇರಿರುವುದರಿಂದ ಚೇರಮನ ಕಥೆ ಪ್ರಾಸಂಗಿಕವಾಗಿ ಅಲ್ಲಿ ಬರುತ್ತದೆ.ನಂಬಿಯಣ್ಣನ ಮಹಿಮೆಯನ್ನು ಕೇಳಿ ಆತನನ್ನು ನೋಡುವ ಬಯಕೆಯಿಂದ ಚೇರಮ ತಿರುವಾರೂರಿಗೆ ಬರುವನು. ನಂಬಿಯಣ್ಣನು ಚೇರಮನನ್ನು ಯಥೋಚಿತವಾಗಿ ಸನ್ಮಾನಿಸಿ ಲಿಂಗಾರ್ಚನಾನಂತರ ಲಿಂಗಕ್ಕೆ ನೈವೇದ್ಯ ಮಾಡಲು ಹಾಲನ್ನು ತರುವನು. 'ನಮ್ಮ ಲಿಂಗಕ್ಕೆ ಹಾಲಿಡಬೇಡ ಹಿಂದಿನಿಂದಲೂ ವ್ರತವೊಂದನ್ನು ಪಾಲಿಸುತ್ತ ಬಂದಿರುವೆನು' ಎಂದು ಚೇರಮ ನಂಬಿಯಣ್ಣನನ್ನು ತಡೆಯುವನು. 'ವ್ರತವಾವುದು' ಎಂದು ನಂಬಿಯಣ್ಣನು ಚೇರಮನನ್ನು ಕೇಳಲು, ಹಿಂದೆ ವ್ಯಾಘ್ರಪಾದನ ಮುಂದೆ ತಾಂಡವ ನೃತ್ಯವನ್ನಾಡುತ್ತ ಶಿವನು ತನ್ನ ಪಾದವನ್ನು ಮೇಲೆ ನೆಗಪಿದ ರೀತಿಯಲ್ಲಿ ಅವನ ದಕ್ಷಿಣ ಪಾದವನ್ನು ನೋಡುವವರೆವಿಗೂ ಹಾಲನ್ನು ಮುಟ್ಟದಿರುವ ನೇಮ ನನ್ನದು ಎಂದು ಚೇರಮ ಹೇಳುವನು. ಇದೇನು ಮಹಾ ಎಂದು ನಂಬಿಯಣ್ಣನು ತಿರುಪಾಡನ್ನು ಹಾಡಿ ಶಿವನನ್ನು ಮೆಚ್ಚಿಸಿ, ನಿತ್ಯವೂ ಚೇರಮೇಂದ್ರನ ಎದುರಿಗೆ ನಿಂದು ಸಂತಸದಿಂದ ತಾಂಡವ ನೃತ್ಯವನ್ನೂ ಪಾದಕಮಲಗಳನ್ನೂ ತೋರೆಂದು ಪ್ರಾರ್ಥಿಸುವನು. ಚೇರಮನು ತನ್ನ ಪೂಜೆಯ ಕೊನೆಯಲ್ಲಿ ಮುರಜವಾದ್ಯವನ್ನು ನುಡಿಸಲು ಶಿವನು ನಾಟ್ಯವಾಡಿ ತನ್ನ ಪಾದಗಳನ್ನು ಕಾಣಿಸುವನು.

ಶಿವಪೂಜಾನಂತರ ಶಿವಭಕ್ತರೊಡಗೂಡಿ ನಂಬಿ ಚೇರಮರಿಬ್ಬರೂ ಹರುಷದಿಂದ ಶಿವಪ್ರಸಾದ ಸ್ವೀಕರಿಸಿ ಶಿವಭಕ್ತಿ ಶಿವತತ್ತ್ವಗೋಷ್ಠಿ ಪ್ರಸಂಗಗಳಲ್ಲಿ ಹಲವು ದಿವಸ ಕಳೆಯುವರು. ಚೇರಮೇಂದ್ರನು ತನ್ನ ಪಟ್ಟಣಕ್ಕೆ ಹಿಂತಿರುಗಿ

ಹೋಗಲು ಯೋಚಿಸಿದಾಗ ನಂಬ್ಯಣ್ಣನು ಹರ್ಷದಿಂದ ವಾಹನ, ಕನಕಭೂಷಣ, ದಿವ್ಯಾಂಬರ ಇವೇ ಮೊದಲಾದ ಮುಖ್ಯ ವಸ್ತುಗಳನ್ನು ಚೇರಮನಿಗೆ ಕೊಟ್ಟು ವಿಶೇಷವಾಗಿ ಪೂಜಿಸಿ, ಚೇರಮೇಂದ್ರ ಹಾಗೂ ಭಕ್ತರ ಜೊತೆಗೂಡಿ ಆವಲೂ-ರನ್ನು ಸಮೀಪಿಸಿ ಬಂದು ಅಲ್ಲಿಯ ಕಾವೇರೀತೀರದಲ್ಲಿನ ಶಿವದೇವಾಲಯದ ಸಮೀಪದಲ್ಲಿ ಓಲಗಗೊಟ್ಟು ಕುಳಿತನು. ಆ ಊರಿನ ನಂಬಿಯಣ್ಣನೆಂಬ ಹೆಸರಿನ ಬಾಲಕನನ್ನು ಮೊಸಳೆ ನುಂಗಲು ಆ ಮಗುವಿನ ತಂದೆ-ತಾಯಿಯರು ಮಗನನ್ನು ನೆನೆದು ಶೋಕಿಸುತ್ತಿರಲು ನಂಬಿಯಣ್ಣ ಅವರನ್ನು ಕರೆಯಿಸಿ ವಿಷಯ ತಿಳಿದು ಅವರ ಸತ್ತ ಮಗುವನ್ನು ಮರಳಿ ಬದುಕಿಸಿಕೊಡುವ ಆಶ್ವಾಸನೆ ಕೊಟ್ಟು ಶಿವಶರಣರೊಡನೆ ಬಾಲಕನನ್ನು ನುಂಗಿದ ಮೊಸಳೆ ಇರುವೆಡೆಗೆ ಬಂದು ಭಕ್ತರಿಗೆ ಅಡ್ಡಬಿದ್ದು, ಚೇರಮೇಂದ್ರನ ಪಾದಗಳಿಗೆ ನಮಿಸಿ, ಶರಣರ ಅಪ್ಪಣೆ ಪಡೆದು ಸದ್ಭಕ್ತಿಯಿಂದ ಶಿವನನ್ನು ಕುರಿತ ತಿರುಪಾಟನ್ನು ಹಾಡಿದನು. ಶಿವ ಮೊಸಳೆ ನುಂಗಿದ ಮಗುವನ್ನು ಬದುಕಿಸುವನು. ಅದನ್ನು ನೋಡಿ ಸಂತಸಗೊಂಡು ಚೇರಮನೇ ಮುಖ್ಯರಾದ ಶಿವಶರಣರೆಲ್ಲರೂ ನಂಬಿಯನ್ನು ಸ್ತುತಿಸುವರು (ಮಹಿಮ ಪ್ರಕರಣ ಪು. ೧೨೦–೧೭೫).

ಚೇರಮನ ಬದುಕಿಗೆ ಸಂಬಂಧಿಸಿದಂತೆ ಹಲವೆಡೆ ಸೂಚ್ಯವಾಗಿ ವಿವರಗಳನ್ನು 'ಪಂಡಿತಾರಾಧ್ಯ ಚರಿತ್ರ'ದಲ್ಲಿ ನಾವು ನೋಡಬಹುದು. ಚೇರಮನಿದಿರಿನಲ್ಲಿ ಶಿವ ಕುಣಿದುದು (ದೀಕ್ಷಾಪ್ರಕರಣ ಪು. ೧೩೭ ಸಾ. ೨೦–೨೧); ಪರಿಜನರೊಡನೆ ಚೇರಮರಾಯನು ಶಿವಪುರಕ್ಕೆ ಹೋದುದು (ಪುರಾತನರ ಪ್ರಕರಣ ಪು. ೨೮೧ ಸಾ. ೩–೪); ಚೇರಮನ ಸದ್ಭಕ್ತಿಯೋಗಕ್ಕೆ ಶಿವ ಪ್ರಕಟವಾದುದು (ದೀಕ್ಷಾಪ್ರಕರಣ ಪು. ೧೭೦ ಸಾ. ೧೪–೧೫); ಧರಣಿಪ ಚೇರಮನು ರುದ್ರಾಕ್ಷಿಯಿಂದ ಪ್ರಕಾಶಿಸುವ ಶ್ರೇಷ್ಠ ಪಕ್ಷರಕ್ಷೆಯುಳ್ಳ ೯೦, ೦೦೦ ಕುದುರೆಗಳೊಡನೆ ಕೈಲಾಸಕ್ಕೆ ಧಾಳಿಮಾಡಿದುದು17 (ಪುರಾತನರ ಪ್ರಕರಣ ಪು. ೪೧೦ ಸಾ. ೨–೬) ಇತ್ಯಾದಿ.

---

17. ಇದು ಪಾಲ್ಕುರಿಕೆ ಸೋಮನ 'ಬಸವ ಪುರಾಣಮು'ವಿನಲ್ಲಿ ಬಂದಿಲ್ಲ. ಆದರೆ, ಇವನನ್ನು ಅನುಸರಿಸಿ ಕನ್ನಡದಲ್ಲಿ 'ಬಸವಪುರಾಣ'ವನ್ನು ಬರೆದಿರುವ ಭೀಮಕವಿಯು ಇದನ್ನು ಹೇಳಿರುವನು (ನೋಡಿ : ಬಸಪು 43. 51). ಭೀಮಕವಿಯು ತನಗೆ ಮೂಲ ಆಕರವಾದ 'ಬಸವಪುರಾಣಮು'ವಿನಲ್ಲಿ ಹೇಳದಿರುವ ಎಷ್ಟೋ ಮಂದಿ ಭಕ್ತರ ಕಥೆಗಳನ್ನು 'ಪಂಡಿತಾರಾಧ್ಯ ಚರಿತ್ರ'ದಿಂದ ಸ್ವೀಕರಿಸಿ ಹೇಳಿರುವನು.

## ಕನ್ನಡ—ಹರಿಹರ

ಚೇರಮನ ಬಗೆಗೆ ಹರಿಹರನಲ್ಲಿ 'ನಂಬಿಯಣ್ಣನ ರಗಳೆ'ಯಲ್ಲಿ ಮಾತ್ರ ವಿವರಗಳು ಲಭ್ಯವಾಗುತ್ತವೆ. ಅರವತ್ತುಮೂವರು ಪುರಾತನರಲ್ಲಿ ಚೇರಮನು ಒಬ್ಬ. ನಂಬಿಯಣ್ಣನ ಆಪ್ತಸ್ನೇಹಿತನಾದ ಇವನ ಬಗೆಗೆ, ಪ್ರತ್ಯೇಕವಾಗಿ ಹರಿಹರ ರಗಳೆಯನ್ನು ಬರೆಯದಿರುವುದು ಆಶ್ಚರ್ಯ. ಹರಿಹರನ ಪ್ರಕಾರ ಚೇರಮನು ತಿರುಪಾಂಡ್ಯಕೊಡುಮುಡಿ ಎಂಬ ಪಟ್ಟಣದ ಅರಸು. ಭುವಿಯಲ್ಲಿ 'ಕಾರಣಿಕ' ನಂಬಿಯಣ್ಣನು ಶಿವನನ್ನು ಸಖಿಮಾಡಿ ಬೇಡುತ್ತ ಸುರತಸುಖಕ್ಕೆ ಕುಂಟಣಿತನಕ್ಕೆ ಎಡೆಯಾಡಿಸುತಲಿರುವನೆಂಬ ಸುದ್ದಿ ಎಲ್ಲೆಡೆ ಹರಡಿರಲು ಅದನ್ನು ಕೇಳಿದ ಪರಮ ಶಿವಾರ್ಚಕನಾದ ಚೇರಮನು ಆ ಮಹಾ ಪುರುಷನನ್ನು ಕಾಣಬೇಕೆಂಬ ಆಶೆಯಿಂದ ತನ್ನ ಪದಾತಿಸಂಕುಲದೊಡನೆ ತಿರುವಾರೂರಿಗೆ ನಡೆದುಬಂದನು. ತಿರುವಾರೂರನ್ನು ಆನಂದದಿಂದ ಪ್ರವೇಶಿಸಿ ದೇವಾಲಯದ ಮುಂದೆ ಬಂದು ಆನೆಯಿಂದಿಳಿದು ತನ್ನವರನ್ನೆಲ್ಲಾ ಹೊರಗೆ ನಿಲ್ಲಿಸಿ ತಾನೊಬ್ಬನೇ ದೇವಾಲಯದ ಒಳಗೆ ಹೋಗಿ ನಂಬಿಯಣ್ಣನಾರೆಂದು ಕೆಲಬಲದವರನ್ನು ವಿಚಾರಿಸುವನು. ನಂಬಿಯಣ್ಣನನ್ನು ನೋಡಿದ ಮೇಲೆ ಚೇರಮನ ಉತ್ಸಾಹ ಸರ್ರನೆ ಇಳಿಯಿತು. ಗದುಗದಾಟದಲ್ಲಿ ಮೈಮರೆತ ನಂಬಿಯಣ್ಣನನ್ನು ನೋಡಿ 'ಏನೆಂದು ಬಂದೆನಿಂತೇನಾದುದೆಲೆ ಶಿವನೆ ಈ ನಿಲವೆ ಹರನನೊಲಿಸುವ ರೂಪು ಶಿವಶಿವನೆ ಪೊರೆದರಿಸಿನದ ಕಂಪು ನಖಿರೇಖೆ ನಗೆಮೊಗಂ ಹರಪೂಜೆಯೇಕಿದೇಕಕ್ಕಟಾ ಸೋಜಿಗಂ' ಎಂದು ಹೇಳುತ್ತ ಶಿವಲಿಂಗದ ಮುಂದೆ ಕುಳ್ಳಿರಲು ಚೇರಮನಿಗೆ ನಿದ್ದೆ ಕವಿಯಿತು. ಕನಸಿನಲ್ಲಿ ಶಿವನು ಬಂದು ಚೇರಮನಿಗೆ 'ನಂಬಿಯೆಂತಿರ್ದನಂತದು ಪೂಜೆ ಕೇಳೆನ್ನ ನಂಬಿ ನೀನಾತನ ಪದಕ್ಕೆರಗು ಸುಖ ನಿನಗೆ' ಎಂದು ಹೇಳಿ ಅವನನ್ನು ಎಚ್ಚರ ಬಡಿಸುವನು. ಶಿವನ ಆಜ್ಞೆಯಂತೆ ಚಿನ್ನದ ತಟ್ಟೆಯಲ್ಲಿ ಪ್ರೀತಿಯಿಂದ ಹೊಸ ಹೊನ್ನನ್ನು ತುಂಬಿಕೊಂಡು ಚೇರಮ ನಂಬಿಯಣ್ಣನಲ್ಲಿಗೆ ಬಂದು ಕಾಣಿಕೆಯಿತ್ತು ಅಡ್ಡಬಿದ್ದು ಕೈಮುಗಿದು ನಿಂತನು. ಈತನಾರೆಂದು ನಂಬಿ ಪಕ್ಕದಲ್ಲಿದ್ದವರನ್ನು ಕೇಳಲು ಮಹಿಮಾಶಾಲಿಯಾದ ಅರಸ ಚೇರಮನೀತನೆಂದು ಅವರು ಹೇಳಿದರು. ಇರೆಂದು ಹೇಳಿ ಮತ್ತೆ ಗದುಗದಾಟದಲ್ಲಿ ನಂಬಿಯಣ್ಣ ಮೈಮರೆತನು.

ಇವರ ಪೂಜೆಯನ್ನು ಪರೀಕ್ಷಿಸಿ ನೋಡುವೆನೆಂದು ಚೇರಮನೂ ಆಟದಲ್ಲಿ ಭಾಗಿಯಾದನು. ಗದುಗವನ್ನು ಕೊಂಡು ಸಂತೋಷದಿಂದ ಬಿಡಲು ಅದು ತಾಗದಿರಲು ಚೇರಮ ಅಚ್ಚರಿಗೊಂಡು 'ಏನಯ್ಯ ಶಿವಭಕ್ತರಪ್ಪವೋ ಅಲ್ಲವೋ ಏನೆಂದೊಡಂ ತಾಗದಭವನೊಳು ಸಲ್ಲೆವೋ' ಎಂದನು. ಅದಕ್ಕೆ ನಂಬಿಯಣ್ಣನು ನಿಂದ ಗದುಗವನ್ನು ನೋಡಿ ಲಿಂಗವೆಂದೇ ನೆನೆದು, ಬಂದ ಗದುಗವನ್ನು ಚೆಂಗಣೆಗಲಾಗಿಯೇ ಭಾವಿಸಿ ಇಡುವುದು ಎನ್ನಲು ಚೇರಮನು ಹಾಗೆಯೇ ಮಾಡಲು ಗದುಗವು ಹೋಗಿ ತಟಿಲ್ಲನೆ ತಾಗಿತು. ಚೇರಮನಲ್ಲಿ ನಂಬಿಯಣ್ಣನ ಬಗೆಗೆ ತೀವ್ರ ನಂಬಿಕೆಯುಂಟಾಗಿ, ತನ್ನ ತಪ್ಪಿನ ಮನವರಿಕೆಯಾಗಿ, ನಡನಡುಗಿ ಅವನ ಪಾದಗಳಿಗೆ ನಮಿಸಿ 'ದೇವ ನೀಂ ಮಾಳ್ಪುದಂ ಪೂಜೆಯೆಂದಱಿಯೆನ್ನೈ ದೇವ ಹೊಱವೇಷಮಂ ಕಂಡು ಮರುಳಾದೆನ್ನೈ ಸೈರಿಪುದು ದೇವ ಎನ್ನಯ ತಪ್ಪಿದೊಂದುಮಂ ಸೈರಿಪುದು ದೇವ ಎನ್ನಪರಾಧವೊಂದುಮಂ' ಎಂದು ಪ್ರಾರ್ಥಿಸಲು ನಂಬಿ ಅವನನ್ನು ಕೈಹಿಡಿದೆತ್ತಿ ಅಪ್ಪಿಕೊಂಡು ತನ್ನ ಪ್ರೇಯಸಿಯಾದ ಪರವೆಯ ಮನೆಗೆ ಕರೆದುತಂದು ಆದರಿಸಿದನು. ನಂಬಿಯಣ್ಣನ ಆತಿಥ್ಯವನ್ನು ಸ್ವೀಕರಿಸಿ ಅವನಿಂದ ಬೀಳ್ಕೊಳ್ಳುವಾಗ 'ದೇವ ಕೈಲಾಸಕ್ಕೆ ನಡೆವಲ್ಲಿ ಎನ್ನೂರನಾವಂದದಿಂ ಪೊಕ್ಕು ಪೋಗವೇಳ್ಕು' ಎಂದು ಹೇಳಿ ಅವನನ್ನು ಒಪ್ಪಿಸಿ ಚೇರಮ ತನ್ನ ಪಟ್ಟಣಕ್ಕೆ ಹಿಂತಿರುಗುವನು (ನಂಬಿರ ಸ್ಥಲ ೧೭ ಸಾ. ೧–೪೭).

ಚೇರಮನಿಗೆ ಮಾತುಕೊಟ್ಟಂತೆ ನಂಬಿಯಣ್ಣ ಕೈಲಾಸಕ್ಕೆ ಪಯಣಗೈವ ಮುನ್ನ ಹಲವು ಶಿವಕ್ಷೇತ್ರಗಳಿಗೆ ಭೇಟಿಕೊಟ್ಟು ಚೇರಮನ ಪಟ್ಟಣವಾದ ತಿರುಪಾಂಡ್ಯಕೊಡುಮುಡಿಗೆ ಬಂದನು. ಈ ಸುದ್ದಿ ತಿಳಿದ ಚೇರಮನು ಪಟ್ಟಣವನ್ನು ಸಿಂಗರಿಸಿ ಬಾವುಟಗಳನ್ನು ಕಟ್ಟಿಸಿ ಚತುರಂಗಬಲದೊಡನೆ ಬಂದು ಸೌಂದರನನ್ನು ಇದಿರುಗೊಂಡನು. ಆಪ್ತಮಿತ್ರರು ಪರಸ್ಪರ ಬಿಗಿದಪ್ಪಿ ಸ್ನೇಹದಿಂದ ನೋಡಿ ಮತ್ತೆಮತ್ತಪ್ಪಿ ಆನೆಯನ್ನೇರಿ ಮಂಗಳವಾದ್ಯಗಳು' ಮೊಳಗುತ್ತಿರಲು ಅತ್ಯಂತ ವೈಭವದಿಂದ ಪುರಪ್ರವೇಶಮಾಡಿದರು. ಅರಮನೆಯ ಮುಂದೆ ಬಂದು ಚೇರಮನು ಮುನ್ನವೇ ಇಳಿದು ಒಳಗೆ ಹೋಗಿ ಸಭಾಭವನದಲ್ಲಿ ಹೊಳೆವ ಮಣಿಸಿಂಹಾಸನವನ್ನು ಹಾಕಿ ಬಂದು ಸೌಂದರ ಪೆರುಮಾಳೆಯನ್ನು ಒಳಗೆ ಕರೆದೊಯ್ದು ಸಿಂಹಾಸನದಲ್ಲಿ ಕೂರಿಸಿ ಶ್ರೀಪಾದವನ್ನು ತೊಳೆದು

ಪಾದೋದಕವನ್ನು ಸ್ವೀಕರಿಸಿ ಪಾದತಳವನ್ನು ಹಣೆ, ಕಣ್ಣು, ಕೆನ್ನೆ, ಎದೆಗಳ ಒತ್ತಿಕೊಂಡು ಕೃತಕೃತ್ಯನಾಗಿ ಮಜ್ಜನ ಭೋಜನ ತಾಂಬೂಲ ಚಂದ ದ್ರವಾದ್ಯನು ಲೇಪನಗಳನ್ನು ಮಾಡಿ ನಂಬಿಯಣ್ಣನ ಮೆಲ್ಲಡಿಗಳನ್ನು ಒತ್ತು ಅವನನ್ನು ಓಲೈಸಿದನು (ನಂಬಿರ ಸ್ಥಲ ೧೮ ಸಾ. ೭೬–೧೧೪).

ಶಿವನ ಪುತ್ರನಾದ ಸೌಂದರನು ಚೇರಮನ ಕಡುನೇಹಕ್ಕೆ ಮನವಿತ್ತು ಲಲನೆಯರ ನವೀನ ನೃತ್ಯಗಳನ್ನು ನೋಡುತ್ತ, ಸುಲಲಿತ ವಾದ್ಯಸ್ವನಗಳನ್ನು ಕೇಳುತ್ತ, ಶಿವಗೀತ ಶಿವಕಥಾಮೃತರಸವನೀಂಟುತ್ತ, ಭವಜಲಧಿಯನ್ನು ಶರಣ ಗೋಷ್ಠಿಯಿಂದ ದಾಟುತ್ತ, ಎಲ್ಲ ಸುಖಗಳನ್ನೂ ಶಿವನಿಗರ್ಪಿಸುತ್ತ, ಸಕಲ ವಿನೋ ದವನ್ನೂ ಶಿವಪೂಜೆಯಾಗಿಸುತ್ತ ಪರಮ ಸುಖದಿಂದಿರುತ್ತಿರಲು ಒಂದು ದಿವ ಸಂತಸದಿಂದ ಉಪ್ಪರಿಗೆಯನ್ನು ಏರಿ ಸೂರ್ಯೋದಯ ಕಾಲದಲ್ಲಿ ಪುರದ ನಾಲ್ಕೂ ದಿಕ್ಕುಗಳನ್ನು ನೋಡುತ್ತಿರುವಲ್ಲಿ ಶಿವಾಲಯವೊಂದು ಕಣ್ಣಿಗೆ ಬಿದ್ದಿತು. ಅದಾವ ದೇವಾಲಯವೆಂದು ಹತ್ತಿರದಲ್ಲಿದ್ದವರನ್ನು ಕೇಳಲು, ತಿರುವಂಜಕ ಆಲಯವೆಂದು ಅವರು ಸೌಂದರನಿಗೆ ತಿಳಿಸಿದರು. ಆ ಮಾತು ಕೇಳ ತ್ತಿದ್ದಂತೆಯೇ ಸೌಂದರನಿಗೆ ರೋಮಾಂಚನವಾಗಿ ಕಣ್ಣುಗಳು ಆನಂದಜಲದಿಂ ತುಂಬಿ ಅರೆಮುಚ್ಚಿ ಪರಮಶಿವನು ಮರ್ತ್ಯಕ್ಕೆ ಬರುವ ಮುನ್ನ ನುಡಿದ ಮಾತು ನೆನಪಾಗಿ ದೇವಾಲಯಕ್ಕೆ ಬಂದು ಶಿವನನ್ನು ಸ್ತುತಿಸಿದನು. ಆಗ ಶಿವ ಪ್ರಸಾದ, ನಂದಿಯುಂಡಿಗೆಯ ಹೊನ್ನು, ಇವುಗಳ ಜೊತೆಗೆ ಶಿವನ ಕರುಣ ದೊಂದಿಗೆ ವೃಷಭಶಾಸನವಾದ ರಾಯಸವೂ ಮುಂದೆ ಬಂದಿತು. ರಾಯಸ ವನ್ನು ಉತ್ತಮಾಂಗದಲ್ಲಿರಿಸಿ ಅದನ್ನು ಬಿಡಿಸಿ ಓದಲು, ಅದರಲ್ಲಿ ನರಲೋಕ ದಲ್ಲಿರುವುದು ಇನ್ನು ಸಾಕು ಐರಾವತವನ್ನೇರಿ ಬೇಗನೆ ಕೈಲಾಸಕ್ಕೆ ಬರುವುದು ಎಂಬ ಆದೇಶವಿದ್ದಿತು. ಶಿವನ ಆಜ್ಞೆಯನ್ನು ಮನಸ್ಸಿಗೆ ತಂದುಕೊಂಡು ಮುಂದೆ ನೋಡಲು ಐರಾವತವು ಕಣ್ಣಮುಂದೆ ಬಂದು ನಿಂತಿತು. ಐರಾವತ ವನ್ನೇರಿ ಶರಣರನ್ನು ಬೀಳ್ಕೊಂಡು ಚೇರಮನಿಗೆ ಸುದ್ದಿ ಮುಟ್ಟಿಸುವಂತೆ ತುಂಬುರನಿಗೆ ಹೇಳಿ ಆಗಸಕ್ಕೆ ನೆಗೆದನು (ನಂಬಿರ ಸ್ಥಲ ೧೯ ಸಾ. ೧–೬೦).

ತುಂಬುರನು ಚೇರಮನಲ್ಲಿಗೆ ಬಂದಾಗ ಅವನು ಸ್ನಾನಗೃಹದಲ್ಲಿದ್ದನು. ತುಂಬರನು ವಿಷಯವನ್ನು ತಿಳಿಸಲು ಅದನ್ನುಕೇಳಿ ಮಜ್ಜನವನೊಲ್ಲದೆ ಭೋಜನ

ರುದ್ರಾಕ್ಷಿಯನ್ನು ಧರಿಸಿ 'ಪೋದನೇ ನಂಬಿಯಣ್ಣಂ ಪೋದಡದಕೇನೊ ಪೋದಡೇಂ ಹಿಂದುಳಿವನಲ್ಲ ಚೇರಮನೇನೊ' ಎಂದು ರೆಕ್ಕೆಗಳಿರುವ ಕುದುರೆಯನ್ನು ತರಿಸಿ ತರತರದ ರುದ್ರಾಕ್ಷಿ ಪಕ್ಕರಿಕೆಯನ್ನು ಅಳವಡಿಸಿ ಮನದಲ್ಲಿ ಪಂಚಾಕ್ಷರಿಯನ್ನು ನೆನೆಯುತ್ತ ಭಸ್ಮವಿಭೂಷಿತನಾಗಿ ತಿರುವುಲಾಪ್ಪುವೆಂಬ ತನ್ನ ಕಾವ್ಯವನ್ನು ತೆಗೆದುಕೊಂಡು ಹರುಷದಿಂದ ಪಚ್ಚೆ ಕುದುರೆಯನ್ನೇರಿ, ನಡೆ ನಂಬಿಯಣ್ಣನಿರ್ದಲ್ಲಿಗೆ ಎಂದು ಕುದುರೆಗೆ ಆದೇಶವಿತ್ತು ಆಗಸಕ್ಕೆ ಹಾರಿದನು. ಸ್ವಲ್ಪ ದೂರ ಸಾಗುವಷ್ಟರಲ್ಲೇ ಸೌಂದರ ಕಾಣಿಸಲು ಇಬ್ಬರೂ ಸಂತಸಪಟ್ಟು ಕೈಲಾಸಕ್ಕೆ ಬರುತ್ತಿರಲು ತಲೆಕೆಳಗೆ ಕಾಲುಮೇಲಾಗಿ ನಡೆವ ಕಾರಿಕಾಲಮ್ಮೆಯರನ್ನು ಕಂಡು ಬೇಗನೆ ಬರಲಾಗುವುದಿಲ್ಲವೆ ಎಂದು ಅವರು ನಕ್ಕುನುಡಿದು ಕೈಲಾಸಕ್ಕೆ ಬರುವರು. ತಮಗೆ ಮುನ್ನವೇ ಕಾರಿಕಾಲಮ್ಮೆಯರು ಅಲ್ಲಿಗೆ ಬಂದಿರುವುದನ್ನು ಕಂಡು 'ಹೇಗೆ ಬಂದಿರಿ ?' ಎಂದು ಅಚ್ಚರಿಗೊಂಡು ಪ್ರಶ್ನಿಸಲು 'ಕಡುಗುದುರೆಯುಂ ಬಡಬಿಚ್ಚೆಯುಂ ಸಮಂ ಮಗನೆ ನಾಣ್ನುಡಿ ತಪ್ಪದು' ಎಂದು ಕಾರಿಕಾಲಮ್ಮೆ ನುಡಿದಳು. ಆ ಮಾತು ಕೇಳಿ ಮನದಲ್ಲಿ ನಾಚಿ ತಮ್ಮ ಅವಿವೇಕವನ್ನು ಕ್ಷಮಿಸುವಂತೆ ಅವರು ಅವಳನ್ನು ಪ್ರಾರ್ಥಿಸುವರು (ನಂಬಿರ ಸ್ಥಲ ೧೯ ಸಾ. ೬೫-೧೨೧).

ಕೈಲಾಸದ ಪ್ರವೇಶದ್ವಾರಕ್ಕೆ ಬರುತ್ತಿರಲು ಪೆರುಮಳೆಲೆಯ ಕುರುಂಬರು ಗುಡಿಯನೆತ್ತಿ ನಲಿನಲಿದು ಕುಣಿಯಲು, ಇದಾರು ? ಎಲ್ಲಿಯ ಗುಡಿ ? ಎಂದು ನಂದೀಶ್ವರನು ವಿಚಾರಿಸಿ ತಿಳಿದು ಶಿವನಿಗೆ ನಂಬಿ ಬರುತ್ತಿರುವ ಸುದ್ದಿ ಮುಟ್ಟಿಸುವನು. ನನ್ನ ಮಗ ನಂಬಿ ಬರುತ್ತಿರುವನು ನೀವೆಲ್ಲ ಅವನನ್ನು ವೈಭವದಿಂದ ಇದಿರುಗೊಳ್ಳುವುದು ಎಂದು ಶಿವ ನುಡಿಯಲು ನಂದೀಶ್ವರ ಹಾಗೂ ಸಕಲ ಪ್ರಮಥಾದಿಗಳು ಬಂದು ಸಡಗರದಿಂದ ನಂಬಿಯಣ್ಣನನ್ನು ಇದಿರುಗೊಂಡರು. ಚೇರಮನನ್ನು ನಂದೀಶ್ವರ ಬಾಗಿಲಲ್ಲೇ ತಡೆದು ನಿಲ್ಲಿಸಿದನು. ಶಿವನ ಬಳಿ ಬಂದು ವಂದಿಸಿದ ನಂಬಿಯಣ್ಣ ಪೆರುಮಳಲೆಯ ಕುರುಂಬರಿಗೆ ಗಣಪದವಿಯನ್ನು ಶಿವನಿಂದ ಕೊಡಿಸಿದನು. ತನ್ನ ಪರಮಮಿತ್ರನಾದ ಚೇರಮನನ್ನು ನಂದೀಶ್ವರನು ತಡೆದು ನಿಲ್ಲಿಸಲು ಅವನು ಬಾಗಿಲಲ್ಲೇ ನಿಂತಿರುವನು ಎಂದು ನಂಬಿಯಣ್ಣ ಶಿವನಲ್ಲಿ ವಿನಂತಿಸಲು ಅದಕ್ಕೆ ಶಿವನು ನಮ್ಮಾಜ್ಞೆ

ಯಿಲ್ಲದೆ ಅವನೇಕೆ ಬಂದನು ? ಬರಲು ನಾವು ಹೇಳಿರುವೆವೆ ? ಭುವಿಯಲ್ಲಿ ನನ್ನ ಭಕ್ತಿಗೆ ವಕ್ರವಾದೆವೆ ! ಎಂದನು. ನಂಬಿಯಣ್ಣ ಶಿವನನ್ನು ಸಮಾಧಾನಿಸುತ್ತ ದೇವಾ, ನನ್ನ ಮಿತ್ರನು ತಾನು ಬರೆದಿರುವ ಕಾವ್ಯವನ್ನು ನಿನಗೆ ಕೇಳಿಸಲೆಂದು ಬಂದಿರುವನು ; ಮೇಲಾಗಿ ಪ್ರೀತಿಯಿಂದ ನನ್ನನ್ನು ಅಗಲಿ ಇರಲಾರದೆ ಬಂದಿರುವನು ಎಂದು ಬಿನ್ನವಿಸಿದನು.

ಶಿವ ತನ್ನ ಮಗನ ಕೋರಿಕೆಯನ್ನು ಮನ್ನಿಸುತ್ತ, ಕರೆ ಚೇರಮನ ಎನ್ನಲು, ಅದಕ್ಕೆ ನಂದೀಶ್ವರನು ಉಪದೇಶವಿಲ್ಲದವರಿಗೆ ಕೈಲಾಸದಲ್ಲಿ ಪ್ರವೇಶವಿಲ್ಲವೆಂದು ತಾವೇ ಅಪ್ಪಣೆ ಕೊಡಿಸಿರುವಿರಿ. ಹೀಗಿರುವಾಗ ಚೇರಮನು ಒಳಗೆ ಬರುವುದು ಹೇಗೆ ? ಎಂದು ತಡೆದೆನೆಂದನು. ಅದಕ್ಕೆ ಶಿವನು, ನಂದೀಶ್ವರಾ, ನೀನೇ ಚೇರಮನಿಗೆ ಗುರುವಾಗಿ ಪ್ರೀತಿಯಿಂದ ಅವನನ್ನು ಇಲ್ಲಿಗೆ ಕರೆದುಕೊಂಡು ಬಾ ಎಂದು ಅಪ್ಪಣೆ ಮಾಡಿದನು. ನಂದೀಶ್ವರನು ಚೇರಮನಿಗೆ ಉಪದೇಶವಿತ್ತು ಶಿವನ ಬಳಿಗೆ ಕರೆದುಕೊಂಡು ಬರಲು, ಶಿವನಿಗೆ ವಂದಿಸಿದ ಚೇರಮ ತನ್ನ ಹೊಸ ಕಾವ್ಯವನ್ನು ಅವನಿಗೆ ಓದಿ ಹೇಳಿದನು. ಅದನ್ನು ಕೇಳಿ ಮೆಚ್ಚಿದ ಶಿವ ಅವನಿಗೂ ಹಾಗೂ ತನ್ನ ಪ್ರೀತಿಯ ಪುತ್ರ ನಂಬಿಯಣ್ಣನಿಗೂ ಗಣಪದವಿಯನ್ನಿತ್ತು ಅನುಗ್ರಹಿಸಿದನು (ನಂಬಿರ ಸ್ಥಳ ೧೯ ಸಾ. ೧೨೩-೨೦೨).

ಭೀಮಕವಿಯ 'ಬಸವಪುರಾಣ' ಹಾಗೂ ನೀಲಕಂಠಾಚಾರ್ಯನ 'ಆರಾಧ್ಯಚಾರಿತ್ರ'ಗಳಲ್ಲಿ ಚೇರಮನ ಕಥೆ ಬರುತ್ತದೆ. ಇವೆರಡೂ ಕೃತಿಗಳು ಆಂಧ್ರದ ಪಾಲ್ಕುರಿಕೆ ಸೋಮನಾಥನ ತೆಲುಗು ದ್ವಿಪದ ಕೃತಿಗಳಾದ 'ಬಸವ ಪುರಾಣಮು' ಹಾಗೂ 'ಪಂಡಿತಾರಾಧ್ಯ ಚರಿತ್ರ'ಗಳನ್ನು ಅನುಸರಿಸಿರುವುದರಿಂದ ಮೂಲದಲ್ಲಿ ಬರುವ ಚೇರಮನ ಕಥೆ ವ್ಯತ್ಯಾಸವಿಲ್ಲದೆ ಇವುಗಳಲ್ಲೂ ಬಂದಿದೆ. ಶ್ರೀಶೈಲಕ್ಕೆ ಯಾತ್ರಾರ್ಥಿಗಳಾಗಿ ಬಂದ ಭಕ್ತರು ಚೇರಮನ ಚಾರಿತ್ರವನ್ನು ಕೇಳುವುದರಲ್ಲಿ ಆಸಕ್ತರಾಗಿದ್ದ ವಿಷಯವನ್ನು ಪಾಲ್ಕುರಿಕೆ ಸೋಮನಾಥನು ತನ್ನ 'ಪಂಡಿತಾರಾಧ್ಯ ಚರಿತ್ರ'ದ ಪರ್ವತ ಪ್ರಕರಣದಲ್ಲಿ ಹೇಳಿರುವನು. ಚೇರಮನ ಕಥೆ ಜಾನಪದ ರೂಪದಲ್ಲಿ ಅವನ ಕಾಲಕ್ಕೆ ಜನಪ್ರಿಯವಾಗಿದ್ದಿತೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಲಕ್ಕಣ್ಣ ದಂಡೇಶನು 'ಶಿವತತ್ತ್ವ ಚಿಂತಾಮಣಿ'ಯಲ್ಲಿ ಮಲೆಯಾಳ ದೇಶದ ಕುಡುಗಲೂರಲ್ಲಿ ರಾಜ್ಯಭಾರಮಾಡುತ್ತಿದ್ದ ಚೇರಮನು ದಯಾಪರನೂ ದುಷ್ಟನಿಗ್ರಹ ಶಿಷ್ಟಪರಿಪಾಲಕನೂ ಆಗಿದ್ದು ಪ್ರಜೆಗಳ ಅಭಿಮತವನ್ನು ತಿಳಿದು ಸಿಂಹಾಸನವನ್ನು ತಿರುನೀಲಕಂಠಪಾಣರಿಗೆ ಕೊಟ್ಟು ಕೈಲಾಸಕ್ಕೆ ಬಿಡದೆ ಧಾಳಿ ಮಾಡಿದನು (೨೫.೩೧) ಎಂದೂ; ತಿರುನೀಲಕಂಠಪಾಣರು ವೀಣೆಯಿಂದ ತಿರುಪಾಟನ್ನು ನುಡಿಸಿ ಶಿವನನ್ನು ಮೆಚ್ಚಿಸಿದರು (೨೫.೫೯) ಎಂದೂ ಹೇಳುವನು.

ಚಿಕ್ಕಮಲ್ಲಿಕಾರ್ಜುನನು (ಸು. ೧೪೬೦) 'ಧರ್ಮಸಂಪಾದನೆ'ಯಲ್ಲಿ ಕಾರಿಕಾಲಮ್ಮೆ ಕೈಲಾಸಕ್ಕೆ ತಲೆಯೂರಿ ನಡೆದುಬರುತ್ತಿರಲು ನಂಬಿ–ಚಾರಮರು ಅವಳನ್ನು ನೋಡಿ 'ಅಮ್ಮಾ ಶಿವಪುರಕ್ಕೆ ಶಿರದಲ್ಲಿ ನಡೆದು ಎಷ್ಟೊತ್ತಿಗೆ ಹೋಗುವಿರಿ ?' ಎನ್ನುವರು. ಅವರ ನಗೆಮಾತನ್ನು ಕೇಳಿ ನೊಂದ ಕಾರಿಕಾಲಮ್ಮೆ ಶಿವನಲ್ಲಿ ತನ್ನ ನೋವನ್ನು ಹೇಳಿಕೊಳ್ಳಲು ಭಕ್ತಪ್ರಿಯನಾದ ಶಿವ ಕೈನೀಡಿ ಅವಳನ್ನು ಕೈಲಾಸಕ್ಕೆ ಕರೆದುಕೊಂಡು ಗಣಪದವಿಯನ್ನು ಅವಳಿಗೆ ಅನುಗ್ರಹಿಸುವನು (೩.೩೦). ಈ ಪ್ರಸಂಗವು ಹರಿಹರನ 'ನಂಬಿಯಣ್ಣನ ರಗಳೆ'ಯಿಂದ ಪ್ರೇರಣೆ ಪಡೆದಿದ್ದು, ಸ್ವಲ್ಪ ವ್ಯತ್ಯಾಸ ಹೊಂದಿದೆ. ಶಿವನೇ ಕಾರಿಕಾಲಮ್ಮೆಯನ್ನು ಕೈನೀಡಿ ಕೈಲಾಸಕ್ಕೆ ಕರೆದುಕೊಳ್ಳುವುದು ಇಲ್ಲಿ ಹೊಸದು, ಇದು ಹರಿಹರನಲ್ಲಿಲ್ಲ. ಇದಲ್ಲದೆ, ಚೇರಮರಾಯ ಶಿವನ ಮೇಲೆ ಧಾಳಿಮಾಡಲು ಎಂಬತ್ತುಸಾವಿರ ಕುದುರೆಯೊಂದಿಗೆ ಹಾಗೂ ಸೇನೆಯೊಂದಿಗೆ ಹೊರಟು ಅಮರರನ್ನು ಧ್ವಂಸಮಾಡಿ ಕೈಲಾಸವನ್ನು ಸೇರಿ ಶಿವನ ದರ್ಶನ ಪಡೆದ ಘಟನೆಯನ್ನು (೩.೨೨) ಚಿಕ್ಕಮಲ್ಲಿಕಾರ್ಜುನ ಹೇಳುವನು.

ನಿಜಗುಣ ಶಿವಯೋಗಿಯು ತನ್ನ 'ಪುರಾತನರ ತ್ರಿವಿಧಿ'ಯಲ್ಲಿ ತಮಿಳು ನಾಡಿನ ಅರುವತ್ತುಮೂವರು ಶೈವಭಕ್ತರ ಬದುಕಿನ ಮಹತ್ವಪೂರ್ಣವಾದ ಘಟನೆಯನ್ನು ಭಕ್ತಿಪೂರ್ವಕವಾಗಿ ಒಂದೊಂದು ತ್ರಿಪದಿಯಲ್ಲಿ ಹೇಳುತ್ತಾ ಹೋಗಿರುವನು. ಚೇರಮನ ಬಗೆಗೆ ಹೇಳುವಾಗ ನಿಜಗುಣ ಶಿವಯೋಗಿಯು, ನಂಬಿಯು ತಿಳಿಸದೆ ಕೈಲಾಸಕ್ಕೆ ಹೋಗಲು ಅದನ್ನು ಕೇಳಿ ಕೈಲಾಸಕ್ಕೆ ಧಾಳಿಯಿಟ್ಟ

ಅತುಲ ಬಲಶಾಲಿಯಾದ ಚೇರಮನ ಚರಣದೂಳಿಗದ ಬಂಟ ತಾನೆನಿಸುವೆನು ಎನ್ನುವನು (ಪ. ೭೧).

ಅರುವತ್ತು ಮೂವರು ಭಕ್ತರ ಜೀವಿತ ವೃತ್ತಾಂತವನ್ನು ಸಮಗ್ರವಾಗಿ ಚಂಪೂವಿನಲ್ಲಿ ಹೇಳಿದ ಕೀರ್ತಿ ಸುರಂಗನಿಗೆ ಸಲ್ಲುತ್ತದೆ. ಆವನ 'ತ್ರಿಷಷ್ಠಿ ಪುರಾತನ ಚಾರಿತ್ರಂ'ನಲ್ಲಿ ಬರುವ ಚೇರಮನ ಕಥೆಯನ್ನು ಸಂಕ್ಷಿಪ್ತವಾಗಿ ಹೀಗೆ ಹೇಳಬಹುದು :

ಚೇರಮಂಡಲದಲ್ಲಿ ನಾನಾವಿಭವಗಳಿಂದ ಕುಡಂಗನೂರು ಶೋಭಿಸಿರುವುದು. ಆ ಪುರವನ್ನು ಚೇರಮನು ಆಳುವನು. ಶಿವನು ಪರಮಭಕ್ತನಾದ ಇವನ ಭಕ್ತಿನಿಷ್ಠೆಗೆ ಮೆಚ್ಚಿ ತನ್ನ ಕಾಲ್ಗಡಗದ ನುಣ್ದನಿ ಕೇಳುವಂತೆ ನಿತ್ಯವೂ ನರ್ತನವನ್ನು ಮಾಡುತ್ತಿದ್ದನು. ಹೀಗಿರುವಾಗ ಒಂದು ದಿನ ಶಿವನನ್ನು ಪೂಜಿಸಿ ನೋಡುತ್ತಿರಲು ನಾಟ್ಯದ ನೂಪುರಧ್ವನಿ ಕೇಳಿಬರದಿರಲು ಮನದಲ್ಲಿ ಕೋಪಿಸಿ ದೇವಾ, ನಿನ್ನೆಯದಿನ ನನಗೆ ನೂಪುರಧ್ವನಿಯನ್ನು ಕೇಳಿಸಿದೆ. ಇಂದೇಕೆ ಕೇಳಿಸುತ್ತಿಲ್ಲ ? ನನ್ನ ಭಕ್ತಿಯಲ್ಲಿ ಯಾವ ಕೊರತೆಯನ್ನು ಕಂಡೆ ? ಎಂದು ಚೇರಮ ನುಡಿಯಲು ಅದಕ್ಕೆ ಸದಾಶಿವನು 'ಧರಣಿಪ, ತಿರುವಾರೂರೆಂಬ ಪುರದಲ್ಲಿ ಸೌಂದರನೆಂಬುವನು ಮಿಗಿಲಾದ ಭಕ್ತಿಯಿಂದ ತಿರುಪಾಡನ್ನು ಹಾಡಲು ಅದನ್ನು ಕೇಳಿ ಮೈಮರೆತೆನು' ಎಂದು ತಾನು ನಾಟ್ಯವಾಡಲು ಮರೆತದ್ದಕ್ಕೆ ಕಾರಣವನ್ನು ತಿಳಿಸಿದನು. ಚೇರಮನು ಆಶ್ಚರ್ಯಚಕಿತನಾಗಿ ಅಂತಹ ಹಿರಿಯ ಭಕ್ತನನ್ನು ನೋಡಬೇಕೆಂದು ನಿಶ್ಚಯಿಸಿ ಪರಿಮಿತ ಜನರೊಡನೆ ಭರದಿಂದ ತಿರುವಾರೂರಿಗೆ ಬಂದನು (ಆ. ೩ ಪ. ೧–೧೬). ಚೇರಮ ಹಾಗೂ ನಂಬಿಯಣ್ಣ ಇವರ ಮೊದಲ ಭೇಟಿಯ ಕಥಾಭಾಗ (ಸೌಂದರನನ್ನು ಚೇರಮ ತನ್ನ ಪಟ್ಟಣಕ್ಕೆ ಆಹ್ವಾನಿಸುವವರೆಗಿನ ಕಥಾಭಾಗ) ಹರಿಹರನ 'ನಂಬಿಯಣ್ಣನ ರಗಳೆ'ಯಲ್ಲಿ ಬರುವಂತೆ ಇಲ್ಲಿಯೂ ನಿರೂಪಿತವಾಗಿದೆ (ಆ. ೩ ಪ. ೧೭–೨೭).

ತಿರುವಾರೂರಿನಲ್ಲಿ ನಂಬಿಯಣ್ಣ ಸುಖದಿಂದಿರುತ್ತಿರಲು ಒಂದು ದಿವಸ ಚೇರಮನಪುರಕ್ಕೆ ಹೋಗಲು ಆವನು ಇಚ್ಛಿಸಿದನು. ಮುರಜ, ಭೇರಿ, ದುಂದುಭಿ, ಶಂಖಗಳು ಧ್ವನಿಮಾಡುತ್ತಿರಲು ತನ್ನ ಸೈನ್ಯದೊಂದಿಗೆ ಸೌಂದರನು ತಿರುವಾರೂರಿನಿಂದ ಹೊರಟು ತಿರುನಾಗಪಟ್ಟಣಕ್ಕೆ ಬಂದು ಅಲ್ಲಿನ ಶಿವನಿಳಯವನ್ನು

ಪ್ರವೇಶಿಸಿ ಲಿಂಗಕ್ಕೆ ಅರ್ಚನೆಯನ್ನು ಮಾಡಿ ನಮಸ್ಕರಿಸಿ ನಲಿದಾಡಿ ತಿರುಪಾಡನ್ನು ಹಾಡಿ 'ಎಲೆ ದೇವಾ, ನಾನು ಚಾರಮನ ಪುರಕ್ಕೆ ಹೋಗುತ್ತಿರುವೆನು. ನನಗೆ ಒಂದು ರೆಕ್ಕೆಯಿರುವ ಕುದುರೆಯನ್ನೂ ಬೆಳ್ಗೊಡೆಯನ್ನೂ ಕೊಡುವುದು' ಎಂದು ಬೇಡಲು ಶಿವನು ಅವನ್ನು ಪ್ರೀತಿಯಿಂದ ಅನುಗ್ರಹಿಸಿದನು (ಆ. ೬೧ ಪ. ೧೩–೧೪) ಸೌಂದರನು ಮುಂದೆ ಹಲವು ಶಿವಕ್ಷೇತ್ರಗಳನ್ನು ಸಂಚರಿಸಿ ಚಾರಮನ ಪಟ್ಟಣಕ್ಕೆ ಬರುವನು. (ಸೌಂದರನನ್ನು ಚಾರಮ ವೈಭವದಿಂದ ಇದಿರುಗೊಂಡು ಕೆಲಕಾಲ ತನ್ನಲ್ಲಿಯೇ ಇರಿಸಿಕೊಂಡು ಸತ್ಕರಿಸುವ ಕಥಾಭಾಗವು ಹರಿಹರನ 'ನಂಬಿಯಣ್ಣನ ರಗಳೆ'ಯನ್ನು ಅನುಸರಿಸಿದೆ.) ಸೌಂದರನು ಚಾರಮನಿಗೆ ತಾನು ಶಿವನಿಂದ ಪಡೆದ ರೆಕ್ಕೆಗಳಿರುವ ಕುದುರೆಯನ್ನು ಕಾಣಿಕೆಯಾಗಿ ಅನುಗ್ರಹಿಸುವನು (ಆ. ೬೧ ಪ. ೯೯ರ ವಚನ). ಚಾರಮ ಅದನ್ನು ಹರುಷದಿಂದ ಸ್ವೀಕರಿಸುವನು (ಇದು ಹರಿಹರನಲ್ಲಿ ಬಂದಿಲ್ಲ).

ಚೇರರಾಜ್ಯದಲ್ಲಿ ತಿರುವಂಜಕಳಪುರವು ಶೋಭಿಸಿರುವುದು. ಆ ಪುರದಲ್ಲಿ ತಿರುನೀಲಕಂಠಪಾಣರೆಂಬ ಭಕ್ತರು ನಿತ್ಯವೂ ಶಿವನಿಗೆ ವೀಣೆಯಿಂದ ತಿರುಪಾಡನ್ನು ಅಲ್ಲಿನ ದೇವಾಲಯದಲ್ಲಿ ಕೇಳಿಸುತ್ತಿದ್ದರು. ಈ ರೀತಿಯ ನಿಯಮದಿಂದ ನಡೆಯುತ್ತಿರಲು ಒಂದು ದಿವಸ ಚಾರಮ ಮಹಾರಾಜನು ಅತುಳೋತ್ಸವದಿಂದ ಆ ದೇವಾಲಯಕ್ಕೆ ಬಂದು ಭಕ್ತಿಯಿಂದ ಅಡ್ಡಬಿದ್ದು ನಂತರ ಪರಮಾನುರಾಗದಿಂದ ರಂಗಮಂಟಪದಲ್ಲಿ ಕುಳಿತು ತಿರುನೀಲಕಂಠಪಾಣರು ನುಡಿಸುತ್ತಿದ್ದ ವೀಣೆಯ ಮಧುರ ನಾದಕ್ಕೆ ಮೆಚ್ಚಿ ಬಹುಮಾನವಾಗಿ ಅವರಿಗೆ ರತ್ನಪೀಠವನ್ನು ಉತ್ಸವದಿಂದ ಕೊಟ್ಟನು (ಆ. ೬೨ ಪ. ೨–೬).

ಸೌಂದರ ಚೇರಮರು ಕೈಲಾಸವನ್ನು ಪ್ರವೇಶಿಸುವುದು ಹಾಗೂ ಸೌಂದರನು ಶಿವನಿಗೆ ಹೇಳಿ ತನ್ನ ಪರಮ ಮಿತ್ರನಾದ ಚಾರಮನಿಗೆ ಗಣಪದವಿಯನ್ನು ಕೊಡಿಸುವುದು ಈ ಕಥಾಭಾಗ ಹರಿಹರನ 'ನಂಬಿಯಣ್ಣನ ರಗಳೆ'ಯಲ್ಲಿ ಬರುವಂತೆ ಇಲ್ಲಿಯೂ ಬಂದಿದೆ (ಆ. ೬೩ ಪ. ೧–೨೦).

ಗುಬ್ಬಿಯ ಮಲ್ಲಣಾರ್ಯನು ತನ್ನ 'ವೀರಶೈವಾಮೃತ ಮಹಾಪುರಾಣ'ದಲ್ಲಿ ಚೇರಮ ಕುರುಂಬರೊಡನೆ ನಂಬಿಯು ಮೆರೆವನೆಂದೂ (ಕಾಂಡ ೮ ಸಂಧಿ ೨

 

ಪದ್ಯ ೧೮), ಶಿವನ ಮೇಲೆ ದಾಳಿಯಿಡುವ ಚೇರಮಾಂಕನ ಬಂಟ ತಾನೆಂದೂ (೮. ೨. ೫೨) ಹೇಳಿರುವನು.

## ವಿರುಪರಾಜ

ಚೇರಮನನ್ನೇ ಕುರಿತು ಪ್ರತ್ಯೇಕ ಕಾವ್ಯವಾದ 'ತ್ರಿಭುವನ ತಿಲಕ'ವನ್ನು ವಿರುಪರಾಜನು (೧೫೧೯) ರಚಿಸಿರುವನು. ಕವಿಯು ಚೇರಮನ ಕಥೆಯನ್ನು ತನ್ನ ಹೆಂಡತಿಗೆ ಹೇಳುವನು. ಇದು ಚೇರಮನ ಬದುಕನ್ನು ಕುರಿತ ಮೊದಲ ಸಾಂಗತ್ಯ ಕೃತಿ. ಚೇರಮನ ಕಥೆ ಕೃತಿಯ ಮೂರನೆಯ ಸಂಧಿಯಿಂದ ಪ್ರಾರಂಭವಾಗುತ್ತದೆ. ಒಂದುದಿನ ಚೇರಮನು ತಿರುವಂಜಕಳನಾಥ ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸಿ ಪರಮಾತ್ಮನ ಪಾದಕಮಲ ಭಕ್ತಿಭಾವವೇ ನಿಜ ಸುಖವೆಂದು ನಂಬಿ ಸಾಮ್ರಾಜ್ಯವನ್ನು ತೊರೆಯಲು ನಿರ್ಧರಿಸಿದನು. ಮಂತ್ರಿಗಳು ರಾಜನ ನಿರ್ಧಾರವನ್ನು ಬದಲಿಸುವಂತೆ ಪ್ರಾರ್ಥಿಸಿದರು. ಚೇರಮನು ಅದಕ್ಕೆ ಕಿವಿಗೊಡಲಿಲ್ಲ. ಒಮ್ಮೆ ತಿರುವಂಜಕಳನಾಥನನ್ನು ಅಷ್ಟವಿಧಾರ್ಚನೆಗಳಿಂದ ಪೂಜೆಮಾಡಿ ಲಿಂಗವನ್ನು ಎವೆಯಿಡದೆ ಭಕ್ತಿಭಾವದಿಂದ ನೋಡಿ ಸ್ತುತಿಸುತ್ತಲಿರಲು ಅಲ್ಲಿಗೆ ಚೋಳ ಪಾಂಡ್ಯರಾಜರು ಬಂದು ವಂದಿಸಿ, ಧರೆಯನ್ನು ಬಿಡದೆ ಪಾಲಿಸಬೇಕೆಂದು ಬಗೆಬಗೆಯಾಗಿ ಪ್ರಾರ್ಥಿಸುವರು. ಅವರ ಒತ್ತಾಯ ತಾಳಲಾರದೆ ಚೇರಮ ತಿರುವಂಜಕಳನಾಥನಿಗೆ ಮೊರೆಹೋಗುವನು. ಕೆಲಕಾಲ ರಾಜ್ಯವಾಳೆಂದು ಶಂಕರನು ಚೇರಮನಿಗೆ ಹಿತ ನುಡಿಯುವನು. ನಿನ್ನ ಪಾದಸೇವೆಯನ್ನು ಅರೆಘಳಿಗೆ ಬಿಟ್ಟಿರಲಾರೆನೆಂದ ಚೇರಮನನ್ನು ಶಂಕರನು ಸಮಾಧಾನಿಸುತ್ತ ನೀನು ನನ್ನನ್ನು ನಿತ್ಯವೂ ಪೂಜಿಸು, ನಿನಗೆ ನನ್ನ ಪಾದದಂದುಗೆಯ ಧ್ವನಿಯನ್ನು ಕೇಳಿಸುವೆನೆನ್ನುವನು. ಚೇರಮನು ಚೋಳ ಪಾಂಡ್ಯ ರಾಜರೊಡನೆ ಪುರಪ್ರವೇಶಮಾಡಿ ಸಿಂಹಾಸನವನ್ನು ಅಲಂಕರಿಸಿದನು.

ಒಮ್ಮೆ ರಾಜನ ಒಡ್ಡೋಲಗಕ್ಕೆ ಭದ್ರಗಾಯಕನು ಬಂದು ಹಾಡಿ ಮಧುರೆಯ ಹಾಲಮುಖಿದೇವನು ಕಳುಹಿಸಿದ ಓಲೆಯನ್ನು ಚೇರಮನಿಗೆ ಕೊಟ್ಟನು. ಶಿವನ ನಿರೂಪದಂತೆ ಆ ಭದ್ರಗಾಯಕನಿಗೆ ನವರತ್ನ ಭೂಷಣ, ಹಯ, ಗಜ, ವಿವಿಧ ವಸ್ತ್ರ ಲೇಪನಗಳನ್ನು ಕೊಟ್ಟು ಕಳುಹಿಸಿದನು. ಒಮ್ಮೆ ದೇವಾಲಯಕ್ಕೆ ಬಂದು

ಪೂಜೆಮಾಡಿ ಚೇರಮನು ನಿತ್ಯವೂ ಕೇಳುವ ಶಿವನ ಪಾದದ ಅಂದುಗೆಯ ಮಧುರ ಧ್ವನಿಯನ್ನು ಆಲಿಸಲು ಕಾತುರ ಚಿತ್ತನಾಗಿ ಕುಳಿತನು. ಅಂದು ಅದು ಕೇಳಿಸದಿದ್ದಾಗ ಚೇರಮನು ಬಹಳ ನೊಂದು ತನ್ನ ಖಡ್ಗದಿಂದ ಕೊರಲನ್ನು ಛೇದಿಸಲು ಹೊರಟನು. ಆ ವೇಳೆಗೆ ಅಂದುಗೆಯ ಧ್ವನಿ ಕೇಳಿಸಿತು. ಚೇರಮನು ಶಿವನನ್ನು ತಡವೇಕಾಯಿತು ಎಂದು ಕೇಳಲು ಅದಕ್ಕೆ ಶಿವನು ಎನ್ನ ನಚ್ಚಿನ ಸೌಂದರ ಪರವೆಯೊಡನೆ ಪ್ರಣಯಕಲಹದಿಂದಿರಲು ಅವರಿಬ್ಬರನ್ನು ಸಮಾಧಾನಿಸುವೆನೆಂಬ ಒಂದು ಹರುಷದಿಂದ ನಾನಿಷ್ಟು ತಡಮಾಡಿದೆ ಎಂದನು. ಕುತೂಹಲಗೊಂಡ ಚೇರಮನು ಸೌಂದರನ ಬಗೆಗೆ ಹೆಚ್ಚು ತಿಳಿಯಲು ಅಪೇಕ್ಷಿಸಿದಾಗ ಶಿವನು ಅವನಿಗೆ ಸೌಂದರನ ವೃತ್ತಾಂತವನ್ನು ತಿಳಿಸುವನು (ಸಂಧಿ ೭.೨೪).

ಶಿವನ ಮಾತು ಕೇಳಿ ಚೇರಮನು ಶಿವನನ್ನೇ ಕುಂಟಣಿ ಮಾಡಿದ ಆ ಮಹಿಮ ನಂಬಿಯನ್ನು ನೋಡಬೇಕೆಂದು ಸಂತಸದಿಂದ ಹೊರಟನು. ಚೇರಮನ ಆಗಮನವನ್ನು ತಿಳಿದ ಸೌಂದರನು ಪುರಜನರೊಡನೆ ಅವನನ್ನು ಸ್ವಾಗತಿಸಿದನು. ನಂಬಿಯನ್ನು ಶಿವನ ಅಪರಾವತಾರವೆಂದೂ ಉತ್ಸವದಲ್ಲಿ ಮಾರಾರಿಯ ವಿಗ್ರಹವೆಂದೂ ಚೇರಮನು ಮನಸ್ಸಿನಲ್ಲಿ ಭಾವಿಸಿದರೆ, ಇವನಂತೆ ಪಡೆದವರಾರಭವನ ರೂಪನೇ ಅಧೀಕ್ಷಿಪ ಕಂಗಳ ಇವನಂತೆ ಶಿವಪದದಂದುಗೆ ಧ್ವನಿಗೇಳ್ವ ಕಿವಿಗಳ ಪಡೆದವರಾರೆಂದು ನಂಬಿಯು ಮನದಲ್ಲಿ ನೆನೆದನು. ಚೇರಮನನ್ನು ಸೌಂದರನು ಮನೆಗೆ ಕರೆತರಲು ಪರವೆ-ಸಂಕಿಲೆಯರು ಮಾಣಿಕದಾರತಿ ಬೆಳಗಿದರು. ಪರಿಮಳಜಲದಲ್ಲಿ ಪಾದಗಳನ್ನು ತೊಳೆದರು. ಶಿವಪೂಜೆಮಾಡಿ ನೈವೇದ್ಯವನೆಡೆಮಾಡುವಾಗ ಚೇರಮನಿಗೆ ಪಾಯಸ ಬಡಿಸಲು ಚೇರಮನು ಅದನ್ನು ಒಲ್ಲೆ ಎಂದನು. ನಂಬಿ ಕಾರಣ ಕೇಳಲು, ಪೊನ್ನಾಂಬಲ ಪುರವರ ತಾಂಡವಮೂರ್ತಿಯ ದರ್ಶನ ಮಾಡಿದಲ್ಲದೆ ಪರಮಾನ್ನವನುಣಲೊಲ್ಲೆ ಎಂದು ಚೇರಮ ನುಡಿದನು. ಆಗ ನಂಬಿಯು ಅಲ್ಲಿಗೆ ನೀವೇತಕ್ಕೆ ಹೋಗಬೇಕು ? ಇಲ್ಲೇ ಅವನನ್ನು ಕಾಣಿಸುತ್ತೇನೆ ಎಂದು ಹೇಳಿ ಪೊಂದಳ ವಿಡಿದು ಹಾಡಿದನು. ಪೊನ್ನಾಂಬಲದಿಂದ ಶಿವನು ಬಂದು ಚೇರಮನಿದಿರಲ್ಲಿ ನಿಂದನು. ನಂಬಿಯು ಪೊನ್ನಾಂಬಲನ ಸ್ತುತಿಮಾಡಿ ಅಂದು ಮಾಡಿದ ನಾಟ್ಯವನ್ನು ಇಂದು ಚೇರಮನಿಗೆ ತೋರಿಸೆಂದನು. ಶಿವನು ನಾಟ್ಯವಾಡಲು ನಂದಿ

ಪದ್ಯ ೧೮), ಶಿವನ ಮೇಲೆ ದಾಳಿಯಿಡುವ ಚೇರಮಾಂಕನ ಬಂಟ ತಾನೆಂದು (೮. ೨. ೫೨) ಹೇಳಿರುವನು.

## ವಿರುಪರಾಜ

ಚೇರಮನನ್ನೇ ಕುರಿತು ಪ್ರತ್ಯೇಕ ಕಾವ್ಯವಾದ 'ತ್ರಿಭುವನ ತಿಲಕ'ವನ್ನು ವಿರುಪರಾಜನು (೧೫೭೯) ರಚಿಸಿರುವನು. ಕವಿಯು ಚೇರಮನ ಕಥೆಯನ್ನು ತನ್ನ ಹೆಂಡತಿಗೆ ಹೇಳುವನು. ಇದು ಚೇರಮನ ಬದುಕನ್ನು ಕುರಿತ ಮೊದಲ ಸಾಂಗತ್ಯ ಕೃತಿ. ಚೇರಮನ ಕಥೆ ಕೃತಿಯ ಮೂರನೆಯ ಸಂಧಿಯಿಂದ ಪ್ರಾರಂಭವಾಗುತ್ತದೆ. ಒಂದುದಿನ ಚೇರಮನು ತಿರುವಂಜಕಳನಾಥ ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸಿ ಪರಮಾತ್ಮನ ಪಾದಕಮಲ ಭಕ್ತಿಭಾವವೇ ನಿಜ ಸುಖವೆಂದು ನಂಬಿ ಸಾಮ್ರಾಜ್ಯವನ್ನು ತೊರೆಯಲು ನಿರ್ಧರಿಸಿದನು. ಮಂತ್ರಿಗಳು ರಾಜನ ನಿರ್ಧಾರವನ್ನು ಬದಲಿಸುವಂತೆ ಪ್ರಾರ್ಥಿಸಿದರು. ಚೇರಮನು ಅದಕ್ಕೆ ಕಿವಿಗೊಡಲಿಲ್ಲ. ಒಮ್ಮೆ ತಿರುವಂಜಕಳನಾಥನನ್ನು ಅಷ್ಟವಿಧಾರ್ಚನೆಗಳಿಂದ ಪೂಜೆಮಾಡಿ ಲಿಂಗವನ್ನು ಎವೆಯಿಡದೆ ಭಕ್ತಿಭಾವದಿಂದ ನೋಡಿ ಸ್ತುತಿಸುತ್ತಲಿರಲು ಅಲ್ಲಿಗೆ ಚೋಳ ಪಾಂಡ್ಯರಾಜರು ಬಂದು ವಂದಿಸಿ, ಧರೆಯನ್ನು ಬಿಡದೆ ಪಾಲಿಸಬೇಕೆಂದು ಬಗೆಬಗೆಯಾಗಿ ಪ್ರಾರ್ಥಿಸುವರು. ಅವರ ಒತ್ತಾಯ ತಾಳಲಾರದೆ ಚೇರಮ ತಿರುವಂಜಕಳನಾಥನಿಗೆ ಮೊರೆಹೋಗುವನು. ಕೆಲಕಾಲ ರಾಜ್ಯವಾಳೆಂದು ಶಂಕರನು ಚೇರಮನಿಗೆ ಹಿತ ನುಡಿಯುವನು. ನಿನ್ನ ಪಾದಸೇವೆಯನ್ನು ಆರೆಘಳಿಗೆ ಬಿಟ್ಟಿರಲಾರೆನೆಂದ ಚೇರಮನನ್ನು ಶಂಕರನು ಸಮಾಧಾನಿಸುತ್ತ ನೀನು ನನ್ನನ್ನು ನಿತ್ಯವೂ ಪೂಜಿಸು, ನಿನಗೆ ನನ್ನ ಪಾದದಂದುಗೆಯ ಧ್ವನಿಯನ್ನು ಕೇಳಿಸುವೆನೆನ್ನುವನು. ಚೇರಮನು ಚೋಳ ಪಾಂಡ್ಯ ರಾಜರೊಡನೆ ಪುರಪ್ರವೇಶಮಾಡಿ ಸಿಂಹಾಸನವನ್ನು ಅಲಂಕರಿಸಿದನು.

ಒಮ್ಮೆ ರಾಜನ ಒಡ್ಡೋಲಗಕ್ಕೆ ಭದ್ರಗಾಯಕನು ಬಂದು ಹಾಡಿ ಮಧುರೆಯ ವಾಲಮುಖಿದೇವನು ಕಳುಹಿಸಿದ ಓಲೆಯನ್ನು ಚೇರಮನಿಗೆ ಕೊಟ್ಟನು. ಶಿವನ ನಿರೂಪದಂತೆ ಆ ಭದ್ರಗಾಯಕನಿಗೆ ನವರತ್ನ ಭೂಷಣ, ಹಯ, ಗಜ, ವಿವಿಧ ವಸ್ತ್ರ ಲೇಪನಗಳನ್ನು ಕೊಟ್ಟು ಕಳುಹಿಸಿದನು. ಒಮ್ಮೆ ದೇವಾಲಯಕ್ಕೆ ಬಂದು

ಪೂಜೆಮಾಡಿ ಚೇರಮನು ನಿತ್ಯವೂ ಕೇಳುವ ಶಿವನ ಪಾದದ ಅಂದುಗೆಯ ಮಧುರ ಧ್ವನಿಯನ್ನು ಆಲಿಸಲು ಕಾತುರ ಚಿತ್ತನಾಗಿ ಕುಳಿತನು. ಅಂದು ಅದು ಕೇಳಿಸದಿದ್ದಾಗ ಚೇರಮನು ಬಹಳ ನೊಂದು ತನ್ನ ಖಡ್ಗದಿಂದ ಕೊರಲನ್ನು ಛೇದಿಸಲು ಹೊರಟನು. ಆ ವೇಳೆಗೆ ಅಂದುಗೆಯ ಧ್ವನಿ ಕೇಳಿಸಿತು. ಚೇರಮನು ಶಿವನನ್ನು ತಡವೇಕಾಯಿತು ಎಂದು ಕೇಳಲು ಅದಕ್ಕೆ ಶಿವನು ಎನ್ನ ನಚ್ಚಿನ ಸೌಂದರ ಪರವೆಯೊಡನೆ ಪ್ರಣಯಕಲಹದಿಂದಿರಲು ಅವರಿಬ್ಬರನ್ನು ಸಮಾಧಾನಿಸುವೆನೆಂಬ ಒಂದು ಹರುಷದಿಂದ ನಾನಿಷ್ಟು ತಡಮಾಡಿದೆ ಎಂದನು. ಕುತೂಹಲಗೊಂಡ ಚೇರಮನು ಸೌಂದರನ ಬಗೆಗೆ ಹೆಚ್ಚು ತಿಳಿಯಲು ಅಪೇಕ್ಷಿಸಿದಾಗ ಶಿವನು ಅವನಿಗೆ ಸೌಂದರನ ವೃತ್ತಾಂತವನ್ನು ತಿಳಿಸುವನು (ಸಂಧಿ ೭.೨೪).

ಶಿವನ ಮಾತು ಕೇಳಿ ಚೇರಮನು ಶಿವನನ್ನೇ ಕುಂಟಣಿ ಮಾಡಿದ ಆ ಮಹಿಮ ನಂಬಿಯನ್ನು ನೋಡಬೇಕೆಂದು ಸಂತಸದಿಂದ ಹೊರಟನು. ಚೇರಮನ ಆಗಮನವನ್ನು ತಿಳಿದ ಸೌಂದರನು ಪುರಜನರೊಡನೆ ಅವನನ್ನು ಸ್ವಾಗತಿಸಿದನು. ನಂಬಿಯನ್ನು ಶಿವನ ಅಪರಾವತಾರವೆಂದೂ ಉತ್ಸವದಲ್ಲಿ ಮಾರಾರಿಯ ವಿಗ್ರಹವೆಂದೂ ಚೇರಮನು ಮನಸ್ಸಿನಲ್ಲಿ ಭಾವಿಸಿದರೆ, ಇವನಂತೆ ಪಡೆದವರಾರಭವನ ರೂಪನೇ ಅಧೀಕ್ಷಿಪ ಕಂಗಳ ಇವನಂತೆ ಶಿವಪದದಂದುಗೆ ಧ್ವನಿಗೇಳ್ವ ಕಿವಿಗಳ ಪಡೆದವರಾರೆಂದು ನಂಬಿಯು ಮನದಲ್ಲಿ ನೆನೆದನು. ಚೇರಮನನ್ನು ಸೌಂದರನು ಮನೆಗೆ ಕರೆತರಲು ಪರವೆ-ಸಂಕಿಲೆಯರು ಮಾಣಿಕದಾರತಿ ಬೆಳಗಿದರು. ಪರಿಮಳಜಲದಲ್ಲಿ ಪಾದಗಳನ್ನು ತೊಳೆದರು. ಶಿವಪೂಜೆಮಾಡಿ ನೈವೇದ್ಯವನೆಡೆಮಾಡುವಾಗ ಚೇರಮನಿಗೆ ಪಾಯಸ ಬಡಿಸಲು ಚೇರಮನು ಅದನ್ನು ಒಲ್ಲೆ ಎಂದನು. ನಂಬಿ ಕಾರಣ ಕೇಳಲು, ಪೊನ್ನಾಂಬಲಪುರವರ ತಾಂಡವಮೂರ್ತಿಯ ದರ್ಶನ ಮಾಡಿದಲ್ಲದೆ ಪರಮಾನ್ನವನುಣಲೊಲ್ಲೆ ಎಂದು ಚೇರಮ ನುಡಿದನು. ಆಗ ನಂಬಿಯು ಅಲ್ಲಿಗೆ ನೀವೇತಕ್ಕೆ ಹೋಗಬೇಕು ? ಇಲ್ಲೇ ಅವನನ್ನು ಕಾಣಿಸುತ್ತೇನೆ ಎಂದು ಹೇಳಿ ಪೊಂದಳ ವಿಡಿದು ಹಾಡಿದನು. ಪೊನ್ನಾಂಬಲದಿಂದ ಶಿವನು ಬಂದು ಚೇರಮನಿದಿರಲ್ಲಿ ನಿಂದನು. ನಂಬಿಯು ಪೊನ್ನಾಂಬಲನ ಸ್ತುತಿಮಾಡಿ ಅಂದು ಮಾಡಿದ ನಾಟ್ಯವನ್ನು ಇಂದು ಚೇರಮನಿಗೆ ತೋರಿಸೆಂದನು. ಶಿವನು ನಾಟ್ಯವಾಡಲು ನಂದಿ

ಕೇಶ್ವರನು ಮುರಜವನ್ನೂ ಗಂಧರ್ವರು ದಂಡಿಗೆಯನ್ನೂ ಹಿಡಿದು ನಿಂತರು. ಮಂದಾಕಿನಿ ತುಳುಕಾಡೆ ಜಡೆಯೊಳಿಟ್ಟ ಚಂದಿರಕಳೆ ಮೆಲ್ಲನಲುಗಾಡೆ ಚಂದದ ಕರ್ಣಕುಂಡಲ ಪಾಡೆ ಮಕುಟವನಾಂದೋಳಿಸಿ ಶಿವನು ನಾಟ್ಯವಾಡಿದನು. ಅದನ್ನು ನೋಡಿ ಪರವೆ-ಸಂಕಿಲೆಯರು ಅಚ್ಚರಿಗೊಂಡರು. ಶಿವನನ್ನು ಬೀಳ್ಕೊಂಡ ಮೇಲೆ ಚೇರಮನು ಪಾಯಸವನ್ನು ಸ್ವೀಕರಿಸಿದನು.

ತಿರುವಾರೂರಿನಲ್ಲಿ ಚೇರಮ ಸೌಂದರರು ಕೆಲವು ದಿವಸ ಸುಖದಿಂದಿದ್ದರು. ಪರವೆ-ಸಂಕಿಲೆಯರೊಡನೆ ತನ್ನ ಪುರಕ್ಕೆ ಬರಬೇಕೆಂದು ಸೌಂದರನನ್ನು ಚೇರಮ ಆಹ್ವಾನಿಸಿದನು. ಎಲ್ಲರೂ ಹೊರಟರು. ಪೊಕ್ಕುಳಿಯೆಂಬ ಪುರಕ್ಕೆ ಬಂದು ಅಲ್ಲಿ ಅವಿನಾಶಿ ಎಂಬ ಹೆಸರಾಂತ ಶಿವಲಿಂಗವಿರಲು ಅದನ್ನು ಕಂಡು ನಮಿಸಿ ಕುಳಿತರು. ಅಷ್ಟರಲ್ಲಿ ನಂಬಿ, ನಂಬಿ ಹಾ ! ಎಂಬ ರೋದನ ಧ್ವನಿ ಕೇಳಿಸಿತು. ದುಃಖಿಸುತ್ತಿದ್ದ ವಿಪ್ರದಂಪತಿಗಳನ್ನು ನಂಬಿಯಣ್ಣನು ತನ್ನ ಬಳಿಗೆ ಕರೆಯಿಸಿಕೊಂಡು ಅವರ ದುಃಖಕ್ಕೆ ಕಾರಣವೇನೆಂದು ಕೇಳಿದನು. ಅದಕ್ಕೆ ಅವರು, ಮಕ್ಕಳಿಲ್ಲದ ನಮಗೆ ಸಂತಾನಭಾಗ್ಯವಾಗಲು ಸಂತಸದಿಂದ| ನಾವು ಮಗುವಿಗೆ ನಂಬಿ ಎಂದು ಹೆಸರಿಟ್ಟು ಸಲಹಿದೆವು. ಇಂದಿಗೆ ಮೂರು ವರ್ಷದ ಕೆಳಗೆ ನಮ್ಮ ಮಗುವನ್ನು ಮೊಸಳೆಯೊಂದು ನುಂಗಿತು. ಇಂದು ಮಗನಿಗೆ ಉಪನಯನವಾದ ದಿನ. ಮಗುವನ್ನು ನೆನೆದು ದುಃಖಿಸುತ್ತಿರುವೆವು ಎಂದರು. ಸೌಂದರನು ಅವರನ್ನು ಸಮಾಧಾನಿಸುತ್ತ ನಿಮ್ಮ ಮಗ ಕಡಲ ತಳದಲ್ಲಿರಲಿ, ಸತ್ಯಲೋಕದಲ್ಲಿರಲಿ ಅವನನ್ನು ಜೀವ ಸಹಿತ ತಂದೊಪ್ಪಿಸುವೆನು ಎಂದು ಹೇಳಿ, ಚೇರಮನೊಡನೆ ಮದಗಜವೇರಿ ನದಿಯ ದಡಕ್ಕೆ ಬಂದನು. ಶಿಶುವ ನುಂಗಿದ ಮೊಸಳೆಯನ್ನು ಸೌಂದರನು ಕರೆದು ನನ್ನ ಹೆಸರಿನ ಬಾಲಕನನ್ನು ಹೊರ ಉಗುಳು ಎಂದು ಆಜ್ಞಾಪಿಸಿದನು. ರಾಹು ನುಂಗಿದ ಚಂದ್ರಬಿಂಬವನುಗುಳ್ವಂತೆ ಮೊಸಳೆಯು ಬಾಲಕನನ್ನು ಹೊರಹಾಕಿತು. ಚೇರಮನು ಈ ಪವಾಡ ಕಂಡು ಸಂತೋಷದಿಂದ ಸೌಂದರನನ್ನು ಹೊಗಳಿದನು.

ತಿರುಮುರುಘಾಂಡಿಯಲ್ಲಿ ಶಿವನಿರುವುದನ್ನು ಗಮನಿಸದೆ ಸೌಂದರನು ಹೋಗುವುದನ್ನು ಕಂಡ ಶಿವನು ಬೇಡನಾಗಿಯೂ ಗಣಗಳು ಬೇಡರಾಗಿಯೂ ಬಂದು ಕಾಡಿದರು. ಬೇಡನಾಯಕನು ನಾಡಾಡಿ ನರನಲ್ಲವೆಂಬುದನ್ನು

ತಿಳಿದ ಚೇರಮ ಸೌಂದರರು ಅವನ ಹೆಜ್ಜೆ ಹಿಡಿದು ಸಾಗಲು ತಿರುಮುರುಘಾಂಡಿ ದೇವಾಲಯಕ್ಕೆ ಬಂದರು. ಶಿವಭಕ್ತರ ಮಹಿಮೆಯನ್ನು ಹೊಗಳಲು ಆದಿಶೇಷನಿಗೂ ಸಾಧ್ಯವಿಲ್ಲವೆಂದು ನಂಬಿಯಣ್ಣನಿಗೆ ಚೇರಮನು ನಮಿಸಿದನು. ಚೇರಮ ತನ್ನ ಪುರಕ್ಕೆ ಸೌಂದರನನ್ನು ಕರೆದುಕೊಂಡು ಹೋಗಿ ಆದರಿಸಿ ತಾನು ರಚಿಸಿದ ಕಾವ್ಯವನ್ನು ಅವನಿಗೆ ಕೇಳಿಸಿದನು. ಸಂತಸಗೊಂಡ ನಂಬಿಯಣ್ಣನು ಇದನ್ನು ಶಿವನಿಗೂ ಕೇಳಿಸಬೇಕು ಎಂದನು. ಶಿವನ ಎರಡನೆಯ ಅವತಾರವಾದ ನೀವು ಕೇಳಿದರೆ ಶಿವ ಕೇಳಿದಂತೆಯೇ ! ಎಂದ ಚೇರಮ. ಶಿವಕಾವ್ಯವನ್ನು ಶಿವನಿಗೇ ಅರ್ಪಿಸಬೇಕು ಎಂದು ಚೇರಮನಿಗೆ ಸೌಂದರ ಒತ್ತಾಯಿಸಿದನು. ಆ ಮಾತು ಕೇಳಿ ಚೇರಮನಿಗೆ ಸಂತಸವಾಯಿತು. ಒಂದು ದಿನ ಚೇರಮ ತೈಲಾಭ್ಯಂಜನದಲ್ಲಿರಲು ಅಲ್ಲಿಗೆ ತುಂಬುರನು ಬಂದು ನಂಬಿಯಣ್ಣನು ಕೈಲಾಸದಿಂದ ಬಂದ ಐರಾವತವೇರಿ ರಜತಾದ್ರಿಗೆ ನಡೆದ ನೆಂದನು. ಚೇರಮನು ನಂಬಿಯು ಎನ್ನನುಳಿದು ಪೋಗೆ ಬಿಡೆನೆಂದು ಎಣ್ಣೆದಲೆ ಯಲ್ಲೇ ತುಂಬುರನ ಜೊತೆ ಕುದುರೆ ಏರಿ ಹೊರಟನು. ಚೇರಮನೊಡನೆ ಆಗಸದಲ್ಲಿ ಆನೆ ಕುದುರೆಗಳ ಸಮೂಹ ನಡೆಯಿತು. ಮಾರ್ಗದಲ್ಲಿ ನಂಬಿಯಣ್ಣ ನನ್ನು ಸೇರಿದ ಚೇರಮ ಅವನಿಗೆ ನಮಸ್ಕರಿಸಿದನು. ಗೆಳೆಯರಿಬ್ಬರೂ ಜೊತೆ ಗೂಡಿ ಹೊರಟರು. ಶಿವ ನಂಬಿಗೆ ಮುನ್ನಿನ ಪದವಿತ್ತ ; ಕುರುಂಬ ತುಂಬುರ ರಿಗೆ ಪ್ರಮಥಪದವಿತ್ತ. ಗಿರಿಜೆಯು ಕನಕಲತೆ ಕಾಂತಿಮತಿಯರಿಗೆ ರುದ್ರಕನ್ಯೆಯ ರಾಗುವಂತೆ ಹರಸಿದಳು.

ವಿರೂಪೇಂದ್ರ ತನ್ನ ಮತ್ತೊಂದು ಕೃತಿಯಾದ 'ಗುರುಭಕ್ತ ಚಾರಿತ್ರ'ದಲ್ಲಿ ಉಪಕಥೆಯಾಗಿ ನಂಬಿಯಣ್ಣನ ಕಥೆಯನ್ನು ಹೇಳಿರುವನು. ಅಲ್ಲಿ ಸೌಂದರನ ಮಹಿಮೆಯನ್ನು ಕೇಳಿ ಕುತೂಹಲಗೊಂಡು ಅವನನ್ನು ಚೇರಮರಾಯ ನೋಡಲು ಬರುವನು. ಆಗ ಸೌಂದರೇಶನು ಗದ್ದುಗದಾಟದಲ್ಲಿ ಪರವಶ ನಾಗಿರಲು ಕೇರಳೇಶನು (= ಚೇರಮನು) ಸಮೀಪದಲ್ಲಿದ್ದವರನ್ನು ಸೌಂದರ ಗಣೇಶನನ್ನು ತೋರಿ ಎಂದು ಕೇಳುವನು (೧೨.೧೫–೧೯). ನರಪತಿಗೆ ಓರ್ವನು ಸೌಂದರನ ಮಹಿಮಾತಿಶಯಗಳನ್ನು ಬಣ್ಣಿಸುತ್ತ ಅವನನ್ನು ತೋರು ವನು (೧೨.೨೦–೩೦). ಇಲ್ಲಿ ಗದ್ದುಗದಾಟ ಪ್ರಸಂಗ ಹರಿಹರನ 'ನಂಬಿ

ಯಣ್ಣನ ರಗಳೆ'ಯಲ್ಲಿ ಬರುವಂತೆ ನಿರೂಪಿತವಾಗಿದೆ (೧೨.೩೧-೫೧). ಸೌಂದರನಲ್ಲಿ ಚೇರಮ ಕ್ಷಮೆ ಯಾಚಿಸುವಲ್ಲಿಗೆ ಚೇರಮ-ನಂಬಿಯಣ್ಣರ ಭೇಟಿಯ ಪ್ರಸಂಗ ಮುಗಿಯುತ್ತದೆ. ಮುಂದೆ ಚೇರಮನ ಬಗೆಗೆ ಕೃತಿಯಲ್ಲಿ ಹೆಚ್ಚಿಗೆ ಏನೂ ತಿಳಿದುಬರುವುದಿಲ್ಲ.

## ಚೇರಮಾಂಕ

ಚೇರಮಾಂಕನ (೧೫೨೬) 'ಚೇರಮಕಾವ್ಯ'ವು ಚೇರಮನ ಜೀವಿತವನ್ನು ಕುರಿತ ಎರಡನೆಯ ಕೃತಿ. ಅಲ್ಲಿ ಬರುವ ಚೇರಮನ ಕಥೆ ಹೀಗಿದೆ : ರಜತಗಿರಿಯಲ್ಲಿ ಶಿವನು ಸಭೆಗೊಟ್ಟಿರಲು ಅಲ್ಲಿಗೆ ನಾರದರ ಪ್ರವೇಶವಾಗುವುದು. ಶಿವ ನಾರದನನ್ನು ಎಲ್ಲಿಂದ ಬಂದೆ ಎಂದು ಕೇಳಲು ಅದಕ್ಕೆ ನಾರದನು ಕಾಶಿ, ಕೇತಾರ, ಗಯೆ, ಶ್ರೀಶೈಲ, ಕಾಳಹಸ್ತಿ, ಕಾಂಚಿ, ಮಧುರೆ, ರಾಮೇಶ್ವರ, ತಿರುವಾರೂರು, ಪೊನ್ನಾಂಬಲ—ಇವೇ ಮೊದಲಾದ ಮುಖ್ಯ ಶಿವನಿಳಯಗಳನ್ನು ನೋಡುತ್ತ ಕೇರಳಕ್ಕೆ ಬಂದೆನು. ಅಲ್ಲಿ ತಿರುವಂಜಕಳನಾಥನನ್ನು ಕಂಡೆನು. ಪಾಂಡ್ಯಮಂಡಲ ಹಾಗೂ ಚೋಳದೇಶಕ್ಕೆ ಸೌಂದರಪಾಂಡ್ಯ ಮತ್ತು ದಿವ್ಯಭಾವಿ ಚೋಳರು ಮುಖ್ಯರು. ಚೊಕ್ಕನೈನಾರು ವಾಲ್ಮೀಕೇಶನ ಹಾಗೂ ಕೇರಳದ ತಿರುವಂಜಕಳದೇವನ ಸೇವೆಗೆಯ್ವ ಶಿವಭಕ್ತ ಅರಸನೊಬ್ಬನನ್ನು ನೀವು ಸೃಷ್ಟಿಸಿ ಕಳುಹಿಸಬೇಕು ಎಂದು ನಾರದನು ಶಿವನನ್ನು ಸಾಷ್ಟಾಂಗಪೂರ್ವಕವಾಗಿ ಪ್ರಾರ್ಥಿಸಿದನು. ಶಿವ ನಾರದನ ಕೋರಿಕೆಯಂತೆ ಪಕ್ಕದಲ್ಲಿದ್ದ ಭಸಿತಕಾಯನೊಬ್ಬನ ಮುಖವನ್ನು ನೋಡಿ, ಭುವಿಗೆ ಹೋಗಿ ಚೇರ ಕೇರಳಕ್ಕೆ ಅಧಿಪತಿಯಾಗು ಎಂದು ಆಜ್ಞೆಮಾಡಿದನು. ಅದನ್ನು ಕೇಳಿದ ಭಸಿತಕಾಯನು ಭಯಗೊಂಡು 'ದೇವಾ, ರಾಜ್ಯಾಂತರ ನರಕವೆಂಬ ವೇದವುಂಟು. ನಿನ್ನ ಪುತ್ರನಾದ ನನ್ನನ್ನು ರಾಜನಾಗಿ ಏಕೆಮಾಡುವೆ ?' ಎನ್ನಲು ಅದಕ್ಕೆ ಶಿವನು 'ನನ್ನ ಪುತ್ರನಾದ ನಂಬಿಯೂ ಮುನ್ನವೇ ಭುವಿಗೆ ಹೋಗಿ ಅವತರಿಸಿರುವನು. ನೀನು ಅವನೊಡನೆ ಸದಾ ಮಿತ್ರನಾಗಿ ಭಸಿತಮಹಿಮೆಯನ್ನು ಭೂಮಂಡಲದಲ್ಲಿ ಹರಡು' ಎಂದು ಅವನನ್ನು ಬೀಳ್ಕೊಂಡನು (೧.೪೪-೫೦).

ಕೇರಳದೇಶಕ್ಕೆ ಶಿರೋರತ್ನಪ್ರಾಯವಾದುದು ಕುಡುಗಲೂರು. ಇದು ಹಿರಿಯ ರಾಜಧಾನಿಯಾಗಿಯೂ ತಿರುವಂಜಕಳಪುರ ಹಾಗೂ ಮಹೋದಯ

ಪಟ್ಟಣಗಳು ಉಪರಾಜಧಾನಿಗಳಾಗಿಯೂ ಶೋಭಿಸಿರುವವು (೨.೧೯). ಕೇರಳದೇಶಕ್ಕೆ ಅಧಿಪತಿ ಅಮರನಾಥ. ಆ ರಾಯನ ಅರಸಿ ಗುಣವತಿ. ಮಕ್ಕಳಿಲ್ಲದ ರಾಜದಂಪತಿಗಳು ಪುತ್ರಭಾಗ್ಯವನ್ನು ಕರುಣಿಸುವಂತೆ ತಿರುವಂಜಕಳ ನಾಥನನ್ನು ಪ್ರಾರ್ಥಿಸಲು ಅವರ ಭಕ್ತಿಗೆ ಮೆಚ್ಚಿ ಅವನು ಪ್ರಸಾದವನ್ನು ಅನುಗ್ರಹಿಸಿದನು. ನವಮಾಸ ತುಂಬಿ ಗುಣವತಿಯು ಒಂದು ಶುಭದಿವಸ ಗಂಡುಮಗುವನ್ನು ಹೆತ್ತಳು. ಹುಟ್ಟಿದ ಮಗುವಿಗೆ ಗೋಧರನೆಂಬ ಹೆಸರನ್ನಿಡಲಾಯಿತು (೩.೨೭). ಏಳನೇ ವಯಸ್ಸಿಗೆ ಕುಮಾರನಿಗೆ ಲಿಖಿತವಾಚಕ ಗಣಿತವು ಸನ್ನಿಹಿತವಾದುವು. ಹದಿನಾರನೇ ವಯಸ್ಸಿಗೆ ವೇದಶಾಸ್ತ್ರ, ಸಾಹಿತ್ಯ ಸಂಗೀತ ಭರತವೈದ್ಯಾದಿ ವಿದ್ಯೆಗಳೆಲ್ಲವೂ ಮುಖೋದ್ಗತವಾಗಿ ಕೇರಳಕುಮಾರನು ಶೋಭಿಸಿದನು (೩.೪೨).

ದಿಗ್ವಿಜಯಯಾತ್ರೆಗೆ ಹೊರಟ ಅಮರನಾಥ ಮಹಾರಾಜನು ಅನೇಕ ರಾಜಮಹಾರಾಜರುಗಳನ್ನು ಜಯಿಸಿ ಮಧುರೆಯನ್ನು ಮುತ್ತಲು ಯೋಚಿಸಿದನು. ಆಗ ಪಾಂಡ್ಯರಾಜನ ಮಂತ್ರಿಯು ತನ್ನ ಒಡೆಯನಿಗೆ ಹಿತವನ್ನು ನುಡಿಯುತ್ತ, ಮಗಳನ್ನು ಕೊಟ್ಟು ಅಮರನಾಥನೊಡನೆ ಕೂಡಿ ಬಾಳುವುದು ಒಳ್ಳೆಯದು ಎಂದನು. ಮಂತ್ರಿಯ ಹಿತವಚನಕ್ಕೆ ತಲೆಬಾಗಿ ವೀರಪಾಂಡ್ಯ ರಾಜನು ಅವನನ್ನೇ ಈ ಶುಭಕಾರ್ಯದ ಮಾತುಕತೆ ನಡೆಸಲು ಕೇರಳಾಧಿಪನಲ್ಲಿಗೆ ಕಳುಹಿಸಿದನು. ಚೇರಮನಿಗೆ ವೀರಪಾಂಡ್ಯರಾಜನ ಕುವರಿಯನ್ನು ಸ್ವೀಕರಿಸಲು ಒಪ್ಪಿದ ಅಮರನಾಥನು ವೀರಪಾಂಡ್ಯನನ್ನು ತನ್ನ ಬಳಿಗೆ ಕರೆಯಿಸಿದನು. ವೀರಪಾಂಡ್ಯನು ಸಂಭ್ರಮದಿಂದ ಬಂದು ವಂದಿಸಲು ಕೇರಳಾಧಿಪನು ಮೇಲೆದ್ದು ಅವನನ್ನು ತಕ್ಕೈಸಿದನು. ಪುರಪ್ರವೇಶಮಾಡಬೇಕೆಂದು ಪಾಂಡ್ಯನು ಕೇಳಲು ಒಪ್ಪಿ ಸಿದ್ಧನಾಗುತ್ತಿರುವಲ್ಲಿ ತಿರುವಂಜಕಳನಾಥನಿಂದ ಅರಸನಿಗೆ ರಾಯಸವೊಂದು ಬಂದಿತು. ತಿರುವಂಜಕಳನಾಥನು ತನ್ನ ರಥೋತ್ಸವಕ್ಕೆ ತಕ್ಷಣ ಬರುವುದೆಂದು ಅರಸನಿಗೆ ನಿರೂಪ ಕಳುಹಿಸಿದ್ದನು. ಶಿವನಿರೂಪದಂತೆ ಮಹಾರಾಜನು ರಾಜಧಾನಿಗೆ ಹಿಂತಿರುಗಿ ಶಿವಾಲಯವನ್ನು ಪ್ರವೇಶಿಸಿ ಸ್ವಾಮಿಗೆ ಸಾಷ್ಟಾಂಗ ನಮಸ್ಕಾರಮಾಡಿ, 'ನಿಮ್ಮ ಸೇವೆಯನ್ನು ಮಾಡಲು ಬಯಸಿ ಬೇಗನೆ ಬಂದೆ' ಎಂದು ಬಿನ್ನವಿಸಿದನು (೪.೪–೩೭).

ವೀರಪಾಂಡ್ಯನ ಕುವರಿಯೊಡನೆ ಚೇರಮನ ವಿವಾಹವಾಯಿತು (೫.೨–೫೧). ಮುಂದೆ ಕೆಲವು ದಿನಗಳಲ್ಲೇ ಅಮರನಾಥ ಮಹಾರಾಜನು ಶಿವಪುರಕ್ಕೆ ನಡೆದನು (೬.೬). ಮಂತ್ರಿಗಳು, ಶಿಷ್ಯರು, ಮನ್ನೆಯರು ಮಕುಟ ವರ್ಧನರು ಚೇರಮರಾಜನ ಬಳಿಗೆ ಬಂದು 'ಹಿರಿಯರಸು ಶಿವಪುರಕ್ಕೆ ನಡೆದನು. ಇನ್ನು ನೀವೇ ನಮಗೆ ಗತಿ ಮತಿ. ನೀವಲ್ಲದೆ ನಮ್ಮನ್ನು ರಕ್ಷಿಸುವವರಾರು? ಭೂವನಿತೆಗೆ ಓಲೆಭಾಗ್ಯವನ್ನು ಅನುಗ್ರಹಿಸಬೇಕು' ಎಂದು ಸಾಷ್ಟಾಂಗ ಪೂರ್ವಕ ನಮಿಸಿದರು. ಚೇರಮನಿಗೆ ವೈರಾಗ್ಯ ತಲೆದೋರಿ 'ನೀವಾರು ನಾನಾರು' ಎನ್ನುತ್ತ ತಪಸ್ಸಿಗೆ ನಡೆದನು (೬.೯). ಧರಣಿಯ ಜನಗಳು, ಆಪ್ತರು, ಪರಿಜನ ಪುರಜನರು ಚೇರಮನಲ್ಲಿಗೆ ಬಂದು 'ನಮಗೆ ಒಡೆಯರಾರು? ಶರಣ ನೀನೆಲ್ಲಿರುವೆಯೊ ಅಲ್ಲಿ ನಾವೂ ಇದ್ದು ಶುದ್ಧರಾಗುವೆವು' ಎಂದು ಭಾಷೆ ಕೊಟ್ಟರು. ಅವರಾಡಿದ ಭಾಷೆಯನ್ನು ಕೇಳುತ್ತ ನಾನು ಬಿಟ್ಟೆನೆಂದರೂ ಇವರು ನನ್ನನ್ನು ಬಿಡುತ್ತಿಲ್ಲವಲ್ಲಾ ಎಂದು ಯೋಚಿಸಿ ತಿರುವಂಜಕಳನಾಥನಲ್ಲಿಗೆ ಬಂದು ನಮಿಸಿ ನನ್ನ ತಪಸ್ಸಿಗೆ ಕಂಟಕವಾದುದು ಎಂದು ನುಡಿದನು. ಆಗ ದೇವನು ಅಶರೀರವಾಣಿಯ ಮೂಲಕ 'ಚೇರಮಾ ಕೇಳು, ರಾಯನಾಗುವುದು ದೋಷವೆ? ಅರಸುತನದಿಂದ ಸಕಲರನ್ನೂ ಸಲಹುವುದು. ನಿನ್ನ ಸಿರಿ ಸುಖ ದುಃಖವೆನ್ನದು. ಈ ಮಾತಿನಲ್ಲಿ ಕಪಟವಿಲ್ಲ' ಎನ್ನಲು ಭಕ್ತರು ಉತ್ಸವ ದಿಂದ ಚೇರಮನಿಗೆ ಪಟ್ಟಗಟ್ಟಿದರು (೬.೧೦–೧೫). ಅರಸನು ಪುರಪ್ರವೇಶ ಮಾಡಿ ಬರುತ್ತಿರಲು ಇದಿರಲ್ಲಿ ಗಂಜಿಹಾಕಿದ ಬಟ್ಟೆಗಳನ್ನು ಹೊತ್ತು ಬರುತ್ತಿದ್ದ ಅಗಸನೊಬ್ಬನ ಮೈಮೇಲೆ ಅದರ ರಸವು ಹರಿದು ಒಣಗಲು ಅದು ಭಸಿತವನ್ನು ಉದ್ಧೂಳಿಸಿದಂತಿದ್ದಿತು. ಆ ಅಗಸನನ್ನು ಭಸ್ಮಧಾರಿ ಭಕ್ತನೆಂದು ಭಾವಿಸಿದ ಅರಸನು ಮದ್ದಾನೆಯಿಂದ ಇಳಿದು ಅವನಿಗೆ ವಂದಿಸಿದನು. ಆಗ ಅಗಸನು ಹೆದರಿ ತಾನು ರಾಜರ ಸೇವಕನಾದ ಅಗಸನೆನ್ನಲು ಅದನ್ನು ಕೇಳದೆ ಶಿವಭಕ್ತ ನೆಂದೇ ಭಾವಿಸಿ ಆದರಿಸಿದನು (೬.೧೭–೧೪).

ಚೇರಮನು ಒಮ್ಮೆ 'ಅನುಭವ ಮಂಟಪ'ವನ್ನು ಪ್ರವೇಶಿಸಿ ಶಿವನ ಭಕ್ತರುಗಳನ್ನೂ ಪುರಜನರನ್ನೂ, ಶ್ರೇಷ್ಠರಾದ ಶಿವಶರಣರನ್ನೂ ಪರಿಜನರನ್ನೂ ಕರೆಯಿಸಿ ಅವರ ನಡುವೆ ಕುಳಿತು ವಿಭೂತಿಯ ಮಹತ್ವವನ್ನು ಆಗಮಾರ್ಥ

ಗಳಿಂದ ವಿಸ್ತಾರವಾಗಿ ನಿರೂಪಿಸುವುದೆಂದು ಆಚಾರ್ಯರನ್ನು ಕೇಳಲು ಅವರು ಉತ್ತರದ ಕಾಲಾಗ್ನಿರುದ್ರನು ಸನತ್ಕುಮಾರನಿಗೆ ಹೇಳಿದುದನ್ನು ತಿಳಿಸಿದರು (೬.೨೨-೩೩). ಹೀಗೆ ವಿಭೂತಿಯ ಮಹತ್ವವನ್ನು ಕೇಳಿ ಸಂತಸದಿಂದ ತನ್ನ ದೇಶದಲ್ಲಿರುವವರನ್ನೆಲ್ಲಾ ಶಿವಭಕ್ತರನ್ನಾಗಿ ಮಾಡಿ, ಶಿವನಿಳಯ ಪೂಜಾಭೋಗವನ್ನು ಹೆಚ್ಚಿಸಿ, ಸಕಲ ಮಾಹೇಶ್ವರರ ಸೇವೆಯನ್ನು ಕುಂದಾಗದಂತೆ ಮಾಡಲು ಚೇರಮನ ಭಂಡಾರವೆಲ್ಲವೂ ವ್ಯಯವಾಗಿ ಅಲ್ಲಿ ಅರೆವೀಸವೂ ಇಲ್ಲವಾಯಿತು. ಶಿವನನ್ನು ಅರಸನು ನೆನೆಯಲು ನಿಂಬಿಯಕ್ಕ, ಚೋಳ, ಬಸವ ಮೊದಲಾದವರಿಗೆ ಹೊನ್ನರನ್ನದ ಮಳೆಯನ್ನು ಪ್ರೀತಿಯಿಂದ ಕರೆದಂತೆ ಚೇರಮನಿಗೆ ಒಲಿದು ತಿರುವಂಜಕಳದಲ್ಲಿ ಹೊನ್ನಿನ ಕೆಮ್ಮಣಿಯ ಮಳೆಯನ್ನು ಶಿವನು ಸುರಿಸಿದನು (೬.೩೪-೩೫).

ಒಮ್ಮೆ ಭದ್ರಗಾಯಕನೆನ್ನುವವನು ರಾಯನ ಆಸ್ಥಾನಕ್ಕೆ ಬಂದು ವಂದಿಸಿ ದಂಡಿಗೆ ಹಿಡಿದು ಇನಿದಾಗಿ ಹಾಡಿದನು. ನಿತ್ಯವೂ ಅವನ ಗಾನವನ್ನು ಆಲಿಸಿ ಮೆಚ್ಚಿದ ಶಿವನು ಚಿನ್ನದ ಕಾಸೊಂದನ್ನು ಕೊಡುತ್ತಿದ್ದನು. ಅದನ್ನು ತೆಗೆದುಕೊಂಡು ಮನೆಗೆ ಬಂದು ಜಂಗಮಕ್ಕೆ ವಿನಿಯೋಗಿಸುತ್ತಿರಲು ಅವನ ಪತ್ನಿ ಅಸಮಾಧಾನದಿಂದ 'ಶಿವನ ಕೃಪೆಯೆನ್ನುವಿರಿ. ಚಿನ್ನದ ಕಾಸೊಂದು ಉದಾರವೆ? ಶಿವನ ವರವೆಲ್ಲಿಯದು, ನಮಗೆ ನಿತ್ಯವೂ ಅಂಬಲಿಯೂಟವಾಗಿರುವಾಗ! ನಮ್ಮ ಬಡತನವನ್ನು ನಿವಾರಿಸದ ಅವನು ಎಂತು ಮುಕ್ತಿಯನ್ನು ಕೊಡುವ?' ಎಂದು ನಿತ್ಯವೂ ಕಾಟಕೊಡುತ್ತಿರಲು ಶಿವನೆಡೆಗೆ ಹೋಗಿ ಹಾಡಲು ಅವನು ಕಾಸೊಂದನ್ನು ಕೊಟ್ಟನು. ಅದನ್ನು ಸ್ವೀಕರಿಸಿ ಭಯಭಕ್ತಿಯಿಂದ ನಿಂತಿರಲು ಶಿವನು ತಡೆದೆಯೇಕೆ ಭದ್ರಗಾಯಕ ಹೇಳು ಹೇಳೆನ್ನಲು 'ಪಡಿ ಸಾಲದೆಂದು ದೇವರ ತೊಳ್ತು ಸುಡಿವಳು' ಎಂದು ತಕ್ಷಣ ಭೀತಿಯಿಂದ ಬಿನ್ನವಿಸಲು ಅದನ್ನು ಕೇಳಿ ಶಿವನು ನಸುನಗುತ್ತ 'ಚಿನ್ನರನ್ನ ಭಂಡಾರವನ್ನು ವಸ್ತ್ರ ಮುಖ್ಯವಸ್ತುಗಳನ್ನು ಪ್ರೀತಿಯಿಂದ ಕೊಟ್ಟು ಕಳುಹಿಸುವುದು' ಎಂದು ಚೇರಮನಿಗೆ ರಾಯಸವಿತ್ತು ಕಳುಹಿಸಿದನು. ಭದ್ರಗಾಯಕನು ಚೇರಮನಿಗೆ ಶಿವನ ರಾಯಸವನ್ನು ತಂದೊಪ್ಪಿಸಲು ಅದನ್ನು ಓದಿದ ಅವನು ಭದ್ರಗಾಯಕನಿಗೆ ವಸ್ತು, ನಿಳಯ, ಧನಕನಕ, ವಸ್ತ್ರಾಭರಣ-ಇವೆಲ್ಲವನ್ನು ಒಪ್ಪಿಸುತ್ತ ಇನ್ನು ಈ ದೇಶವೇ

 

ಆದಿಯಾಗಿ ನಾನು ನನ್ನ ಗೋತ್ರಸಹಿತ ನಿನ್ನ ಸೇವಕರ ಸೇವಕನು ಎಂದನು. ಅಲ್ಲಿಂದ ಮುಂದೆ ಬರುತ್ತ ಭದ್ರಗಾಯಕನು ಭಸ್ಮದ ಮನೆಯನ್ನು ಕಂಡನು. ಭಸಿತರಾಶಿಯನ್ನು ಕಂಡು ಮನದೊಳಗೆ ಹಾರೈಸಿ ಮಹಾರಾಜನು ಕೊಟ್ಟ ಅಖಿಲ ವಸ್ತುಗಳನ್ನು ಬಿಟ್ಟು ವಿಭೂತಿಯನ್ನು ಪೊಟ್ಟಣಗಟ್ಟಿಕೊಂಡು ಹೋಗು ತ್ತಿರಲು, ಚೇರಮನು ಮೆಚ್ಚಿ ಪ್ರೀತಿಯಿಂದ ಮದ್ದಾನೆಗಳ ಮೇಲೆ ಅಧಿಕ ವಸ್ತುವನ್ನು ತುಂಬಿ ಹೇರಿಸಿ ಕಳುಹಿಸಿದನು (೬.೩೯–೫೦).

ಚೇರಮನು ಸೂರ್ಯೋದಯ ಕಾಲದಲ್ಲಿ ಶಿವನನ್ನು ಪೂಜೆ ಮಾಡಿರಲು ಸೇವಕನೋರ್ವನು ಬಂದು 'ಕಿಱುಜಡೆಯ ಸುಲಿಪಲ್ಲ ಸಾಸಿಗಂ ಜತಿ ಯೋರ್ವನು' ಆವದೇಶದಿಂದಲೋ ಬಂದಿರುವನೆಂದು ತಿಳಿಸುವನು. ಭೂಪನು ಇದಿರೆದ್ದು ನಡೆದು ಅವರ ಕಾಲಿಗೆ ನಮಸ್ಕರಿಸಿ 'ದೇವಾ ನೀವಾವ ದೇಶದಿಂದ ಬಂದಿರಿ ? ನಿಮ್ಮ ಪಾದಗಳನ್ನು ಕಂಡು ನಾನು ಬದುಕಿದೆ' ಎಂದು ನುಡಿಯು ವನು. ಆ ಮಾತಿಗೆ ಯತಿರಾಜನು ಪೊನ್ನಾಂಬಲದಿಂದ ನಾವು ಬಂದೆವು ಎನ್ನುವನು (೯.೨–೪). ಆ ಸ್ಥಾನದ ವಿಶೇಷವನ್ನೂ ಶಿವನೇನು ಮಾಡಿದನೆಂಬು ದನ್ನೂ ತಿಳಿಸಬೇಕೆಂದು ರಾಜನು ಕೇಳಲು ಪೊನ್ನಾಂಬಲದ ಮಹಿಮೆಯನ್ನು ಯತಿಯು ತಿಳಿಯಪಡಿಸುವನು (೯.೫–೮). ಆ ರಾತ್ರಿ ಚೇರಮನು ಕನಸಿನಲ್ಲಿ ಶಿವನ ನಾಟ್ಯರೂಪವನ್ನು ನೆನೆದು ಪೊನ್ನಾಂಬಲೇಶನಿಗೆ ವಂದಿಸಿ ಸ್ವಾಮಿ, ನಿಮ್ಮ ನಾಟ್ಯವಾರ್ತೆಯನ್ನು ಶರಣರು ತಿಳಿಸಲು ಅದನ್ನು ಕೇಳಿದ ನನಗೆ ನಿಮ್ಮ ಪಾದದುಲಿಯನ್ನಾಲಿಸುವ ಕೃಪೆಮಾಡಿ ಎನ್ನುವನು. ಶಿವ ಚೇರಮನಿಗೆ ಸಮ್ಮತಿಸಲು, ತಿಳಿವುಗೊಂಡ ಅರಸನು ಶಿವನಾಡಿದ ಮಾತನ್ನು ನೆನೆದು ಸಂತಸ ಗೊಂಡು ನವರತ್ನಗಳಿಂದ ನಾಟ್ಯಮಂಟಪವನ್ನು ಮಾಡಿಸಿದನು. ಶಿವನನ್ನು ಚೇರಮ ನೆನೆಯಲು ಆ ಮಂಟಪದ ಜವನಿಕೆಯ ಮರೆಗೆ ಬಂದು ಅವನು ನಾಟ್ಯವಾಡಿದನು. ಪೊನ್ನಾಂಬಲೇಶನ ಪಾದದಂದುಗೆಯ ಮಂಜುಳಧ್ವನಿಯು ಚೇರಮನ ಕಿವಿಗೆ ಆಹ್ಲಾದವನ್ನುಂಟುಮಾಡಿತು. ಭಕ್ತನ ಕೋರಿಕೆಯಂತೆ ನಿತ್ಯವೂ ಮನೋಹರವಾದ ತೆರೆಯಮರೆಯಲ್ಲಿ ಶಿವನು ನಾಟ್ಯವಾಡುತ್ತಿರಲು ಒಂದುದಿವಸ ಪಾದದಂದುಗೆಯ ಮಧುರಧ್ವನಿ ಕೇಳಿಬರಲಿಲ್ಲ. ಚೇರಮ ನೊಂದು ಹವ್ವನೆ ಹಾರಿ ಕಂಗೆಟ್ಟು ತಾನು ಪುಣ್ಯಹೀನನೆಂದು ಕಣ್ಣೀರ್ಗರೆದು ಶಿವಧ್ಯಾನ

ಮಾಡಿ ಎಚ್ಚತ್ತು ನಿತ್ಯದಂತೆ ಜವನಿಕೆಯ ಮರೆಯಲ್ಲಿ ಕುಣಿವ ಕ್ರಮ ತಪ್ಪಲು ಕಾರಣವೇನು ? ನನ್ನಲ್ಲಿ ಕೊರತೆ ಏನನ್ನು ಕಂಡೆ ? ಎಂದು ಘುಡುಘುಡಿಸುತ್ತ ಕಠಾರಿಯನ್ನು ಒರೆಯಿಂದ ಇರಿದು ತನ್ನನ್ನು ತಾನೇ ಕೊಂದುಕೊಳ್ಳಲು ಅನುವಾದನು. ಆಗ ಅಶರೀರವಾಣಿಯೊಂದು 'ಚೇರಮಾ ನಿನಗೇಕಿಷ್ಟು ರಾಜಸ್ವ ? ನಿನ್ನಲ್ಲಿ ಭಕ್ತಿ ಕುಂದಾಯಿತೆ ? ನಂಬಿಯಣ್ಣನು ಶ್ರೇಷ್ಠ ತಿರುಪಾಡಿಂದ ನನ್ನನ್ನು ನೆನೆಯಲು ತಿರುವಾರೂರಿಗೆ ಹೋಗಿ ಬೇಗ ಬಂದವು' ಎಂದಿತು. ಪೊನ್ನಾಂಬಲೇಶನು ತೆರೆಯ ಮರೆಗೆ ಬಂದು ನಿತ್ಯದಂತೆ ಕುಣಿದನು. ಪೊನ್ನಾಂಬಲೇಶನ ನಿರೂಪಕ್ಕೆ ಕೇರಳಾಧೀಶನು ಅಚ್ಚರಿಗೊಂಡು ಹೀಗೆ ಶಿವನನ್ನು ವಶಮಾಡಿಕೊಂಡಾತ ಯಾರೆಂದು ತನ್ನ ಮುಂದಿದ್ದ ಭಕ್ತರೊಳಗೆ, ಆರೂರಿನಿಂದ ಬಂದಿದ್ದ ಮಾಹೇಶ್ವರರನ್ನು ಪ್ರಶ್ನಿಸಿದನು. ಅವರು ನಂಬಿಯಣ್ಣನ ಕಥೆಯನ್ನು ಚೇರಮನಿಗೆ ತಿಳಿಯಹೇಳುವರು (೯.೨೦–೬೧).

ಚೇರಮ ಪುಳಕ ಗದ್ಗದ ಹೊಮ್ಮುತ್ತಿರಲು, ಆನಂದದ ಕಣ್ಣೀರು ಸೋರುತ್ತಿರಲು ಅದನ್ನು ಕೇಳಿ ಆನಂದಿಸುತ್ತ ಹಾಗಿಲ್ಲದಿದ್ದರೆ ಪೊನ್ನಾಂಬಲೇಶನು ನೃತ್ಯವನ್ನು ಬಿಟ್ಟು ಹೋಗುತ್ತಿದ್ದನೆ ? ಎಂದು ವಿಚಾರ ಮಾಡುತ್ತ ಸೌಂದರೇಶನನ್ನು ನೋಡಲು ಹೋಗುವ ತೀರ್ಮಾನವನ್ನು ಮನದಲ್ಲಿ ತಕ್ಷಣ ಕೈಗೊಂಡನು.

ಚೇರಮನ ಆಗಮನವನ್ನು ಶಿವಭಕ್ತರಿಂದ ತಿಳಿದ ಸೌಂದರನು ಪಟ್ಟಣವನ್ನು ಸಿಂಗರಿಸಲು ಹೇಳಿ ತುಂಬುರನೊಡನೆ ಬಂದು ಚೇರಮನನ್ನು ಇದಿರುಗೊಂಡನು. ಚೇರಮನು ಸೌಂದರನನ್ನು ಕಂಡು ಸಾಷ್ಟಾಂಗ ಪ್ರಣಾಮ ಮಾಡಲು ಅವನನ್ನು ಹಿಡಿದೆತ್ತಿ ತಕ್ಕೈಸಿ ಮತ್ತೆ ಪ್ರೀತಿಯಿಂದ ಅಪ್ಪಿ ಬಿಗಿದಪ್ಪಿ ಬಂದು ಪಟ್ಟದಾನೆಯ ಶಿರದ ಮೇಲಿಡಲಾದ ಸಿಂಹಾಸನದಲ್ಲಿ ಇರ್ವರೂ ಕುಳಿತು ಪುರವನ್ನು ಪ್ರವೇಶಿಸಿದರು. ಅರಮನೆಗೆ ಬಂದು ಶಂಕರನ ಪೂಜೆಯನ್ನು ಮಾಡುವಲ್ಲಿ ಪರವೆ ದಿವ್ಯಾನ್ನಗಳನ್ನು ವ್ಯಂಜನಗಳನ್ನು ಗಡಣಿಸಿದಳು. ಎಡೆಮಾಡಿ ಲಿಂಗಪ್ರಸಾದವನ್ನು ನಾವು ನೀವು ಒಡನೆ ಆರೋಗಣೆಯ ಮಾಡೋಣವೆಂದು ನಂಬಿ ಹೇಳಲು ಅದಕ್ಕೆ ಚೇರಮನು ನಿಮ್ಮೊಡನೆ ನಾನು ಮಾಧುರಾನ

ವನ್ನು ಸಡಗರದಿಂದ ಉಣ್ಣಲಾರೆ. ಉದಕಮಿಶ್ರಾನ್ನವನ್ನು ಶಿವನಿಗಿತ್ತು ಕೊಂಬುದೇ ವ್ರತವಾಗಿ ನಡೆಸುತ್ತಿರುವೆನು ಎಂದನು.

'ವ್ರತವೇಕೆ ?' ಎಂದು ಸೌಂದರನು ಕೇಳಲು 'ಪೊನ್ನಾಂಬಲೇಶನು ತೆರೆಯಮರೆಯಲ್ಲಿ ಕುಣಿದು ಪಾದದಂದುಗೆಯ ಮಧುರಧ್ವನಿಯನ್ನು ನನಗೆ ನಿತ್ಯವೂ ಕೇಳಿಸುತ್ತಿರುವನು. ಇನ್ನು ಪೊನ್ನಾಂಬಲೇಶನಲ್ಲಿಗೆ ಹೋಗಿ ಅವನ ಪಾದಗಳನ್ನು ನೋಡುವವರೆವಿಗೂ ಇವು ಸಲ್ಲವು' ಎಂದು ಚೇರಮನು ನುಡಿದನು.

'ಇಷ್ಟೆಯೆ ! ದೊಡ್ಡ ಕಾರ್ಯವೆಂದಿದ್ದೆ. ಹಿಂದೆ ಕುಣಿದ ಶಿವನನ್ನು ನಿನ್ನ ಮುಂದೆಯೇ ಕುಣಿಸುವೆನು. ಅವನ ಪಾದಗಳನ್ನು ನೋಡಿದ ಮೇಲಾದರೂ ಮಧುರಾನ್ನವನ್ನು ಸ್ವೀಕರಿಸುವುದು' ಎಂದು ಸೌಂದರನು ಚೇರಮನಿಗೆ ಹೇಳಿ 'ಶಿವನೇ, ಚೇರಮನ ಇದಿರಿನಲ್ಲಿ ಕುಣಿ' ಎಂದು ಹಾಡಿದನು. ಶಿವ ಸುಮ್ಮನಿರಲು 'ದೇವಾ, ಸಾಸಿರವೇಕೆ ಪತ್ರವನ್ನು ಹಿಂದಿರುಗಿಸು' ಎಂದು ಸೌಂದರನೆನ್ನಲು ಅದಕ್ಕೆ ಶಿವನು 'ನಾವೀಗ ಆಡಲಾರೆವೆಂದೆವೆ ನಂಬಿ' ಎಂದು ನಾಟ್ಯಕ್ಕೆ ನಿಂತನು. 'ಕಾರಿಕಾಲಮ್ಮೆ ಗುಂಡಯ್ಯ ಇವರುಗಳಿದಿರಿನಲ್ಲಿ ಕುಣಿದ ಶಿವನ ಪಾದಗಳನ್ನು ಕಂಡೆಯಾ' ಎಂದು ಸೌಂದರನು ಚೇರಮನನ್ನು ಕೇಳಿ, ನಂತರ, ಶಿವನಿಗೆ ಚೇರಮನ ಮುಂದಿಂದು ಮೊದಲು ಕುಣಿಯೆಂದು ಅಪ್ಪಣೆಯನಿತ್ತನು. ಸಂಕಿಲೆ ಮಾಡುವ ವಿನಯೋಪಚಾರವನ್ನು ಜೊತೆಗೂಡಿ ಸ್ವೀಕರಿಸಿ, ಚೋಳಮಂಡಲದಲ್ಲಿ ಲಿಂಗಾರಾಧನೆಯ ಮಾಡೋಣವೆಂದು ಸೌಂದರ ಕೇರಳಾಧಿಪರು ಹೊರಟರು (೧೦.೨೩-೪೧).

ನಂಬಿಯಣ್ಣನೊಡನೆ ಚೇರಮನು ನಡೆತರುತ್ತ ದಿವ್ಯಶಿವಲಿಂಗಗಳನ್ನು ನೋಡುತ್ತ ಶಿವನ ಕೃಪೆ ಪಡೆಯುತ್ತ ಪೊನ್ನಾಂಬಲಕ್ಕೆ ಬಂದನು. ಅಲ್ಲಿ ಅವರು ಪೊನ್ನಾಂಬಲೇಶನಿಗೆ ವಂದಿಸಿ ಆರೂರಿಗೆ ಹಿಂತಿರುಗಿದರು. ಅಲ್ಲಿ ಪರವೆ-ಸಂಕಿಲೆಯರು ಮಾಡಿದ ಅನೇಕ ಸತ್ಕಾರಗಳನ್ನು ಸ್ವೀಕರಿಸಿ ಕೆಲದಿವಸ ತಂಗಿದ್ದು ಚೇರಮನು ತನ್ನ ಊರಿಗೆ ಹೊರಡಲು, ನಂಬ್ಯಣ್ಣನು ಅವನಿಗೆ ಅನರ್ಘ್ಯ ವಸ್ತುಗಳನ್ನಿತ್ತು ಮನ್ನಿಸಿದನು. ಚೇರಮನು ಬೇಡಿದವರಿಗೆ ಸರ್ವಸ್ವವನ್ನೂ ಭಕ್ತಿಯಿಂದ ಅರ್ಪಿಸುತ್ತ ಸೌಂದರನೊಡನೆ ನಡೆದನು. ಮುಂದೆ ವೇದವನ-

ಸಿದ್ಧ ಶ್ರೀರ್ಥಗಳನ್ನು ಸಂದರ್ಶಿಸಿ ಪಾಂಡ್ಯನ ದೇಶಕ್ಕೆ ಮಿತ್ರರಿಬ್ಬರೂ ಬಂದರು. ಆ ವೇಳೆಗೆ ಚೇರಮನಿಗೆ ಹೆಣ್ಣುಕೊಟ್ಟ ಮಾವನಾದ ವೀರಪಾಂಡ್ಯನು ಇವರನ್ನು ವೈಭವದಿಂದ ಇದಿರುಗೊಂಡು ಹೆಚ್ಚಿನ ಸೇವೆಯಿಂದ ಸತ್ಕರಿಸುತ್ತಿರಲು ಅಲ್ಲಿಗೆ ಚೋಳನು ಮಹಾವೈಭವದಿಂದ ಬಂದು ಇಬ್ಬರಿಗೂ ವಂದಿಸಿದನು. ಅಲ್ಲಿ ಕೆಲವು ದಿನಗಳಿದ್ದು ಪಾಂಡ್ಯನ ದೇಶಸ್ಥಾನಗಳೆಲ್ಲವನ್ನೂ ನೋಡಿ ಇಬ್ಬರೂ ತಮ್ಮ ತಮ್ಮ ದೇಶಗಳಿಗೆ ಹಿಂತಿರುಗುವಲ್ಲಿ ಪಾಂಡ್ಯಚೋಳರು ನಮಿಸಿದರು. ಸೌಂದರ ಚೇರಮರು ಬರುತ್ತ ಕಾವೇರಿಯನ್ನು ಕಂಡು ಪ್ರೀತಿಯಿಂದ ಅದನ್ನು ದಾಟಿದರು. ಮುಂದೆ ಬರುತ್ತಿರಲು ಬೇರೊಂದು ಸಮುದ್ರದಂತೆ ಹರಿವ ನದಿಯನ್ನು ಕಂಡು ಪಂಚನದಿಯ ಅಧಿಪನನ್ನು ನಂಬಿಯಣ್ಣ ಸ್ತುತಿಸಲು 'ಓ' ಎಂದು ಶಂಕರನು ದನಿಗೆಯ್ದನು. ಶಿವನ ದನಿಯನ್ನು ಕೇಳಿ ಚೇರಮ ನಂಬಿಯಣ್ಣರು ಗಂಗೆಯೊಡನೆ ದಾರಿಬಿಡುವಂತೆ ಪ್ರಾರ್ಥಿಸಿದರು. ಕಾವೇರಿ ಎರಡು ಭಾಗವಾಗಿ ದಾರಿಬಿಟ್ಟುಕೊಡಲು ಇವರು ಮಳಲಿನಲ್ಲಿ ನಡೆದು ದಡ ಸೇರಿ ಪಂಚನದೀಶನ ಸ್ತವನ ಮಾಡಿದರು. ಅಲ್ಲಿಂದ ಇಬ್ಬರೂ ಪೊಕ್ಕುಳಿಯೂರಿಗೆ ಬಂದು ಅಲ್ಲಿನ ಅವಿನಾಶಿಲಿಂಗಕ್ಕೆ ವಂದಿಸಿರಲು ಮೊಸಳೆ ನುಂಗಿದ ಮಗನಿಗಾಗಿ ದುಃಖಿಸುತ್ತಿದ್ದ ಅಬಲೆಯ ರೋದನಧ್ವನಿ ಕೇಳಿಸಿತು. ಅವಳ ದುಃಖದ ಕಥೆ ಕೇಳಿ, ಮೊಸಳೆಯಿಂದ ಅವಳ ಮಗನನ್ನು ಕೊಡಿಸಿ, ಏಳು ವರುಷದ ನಂಬಿಯೆಂಬ ಆ ಬಾಲಕನಿಗೆ ನಂಬಿಯಣ್ಣನೇ ನಿಂತು ಮುಂಜಿಗಟ್ಟಿಸಿದನು. ಮುಂದೆ ಅನೇಕ ಸುಕ್ಷೇತ್ರಗಳನ್ನು ನೋಡಿಕೊಂಡು ಅವಿನಾಶಿಲಿಂಗಕ್ಕೆ ನಮಿಸಿ ಅವರು ಬೀಳ್ಕೊಂಡರು. ಚೇರಮನು ತನ್ನೂರಿಗೆ ಹೋಗುವೆನೆಂದು ನಂಬಿಯಣ್ಣನಿಗೆ ಹೇಳಲು ಅವರಿಬ್ಬರ ಎದೆಯಲ್ಲಿ ಸ್ನೇಹ ಭಾವವು ಉಕ್ಕಿ ಪರಸ್ಪರ ಅಗಲುವುದರ ಬದಲು ಈ ಕ್ಷಣವೆ ಕೈಲಾಸಕ್ಕೆ ಹೋಗುವುದೇ ಸರಿಯೆಂದು ಅವರು ದುಃಖಿಸಿದರು. ಕೈಲಾಸಕ್ಕೆ ಹೋಗುವ ಮುನ್ನ ನನಗೆ ಹೇಳಿ ಹೋಗಬೇಕೆಂದು ಚೇರಮ ನಂಬಿಯಣ್ಣನನ್ನು ಪ್ರಾರ್ಥಿಸಿ ಅವನ ಒಪ್ಪಿಗೆ ಪಡೆದನು. ಇಬ್ಬರೂ ತಮ್ಮ ತಮ್ಮ ಪುರಗಳಿಗೆ ತೆರಳಿದರು(೧೦. ೪೨–೫೫).

ಚೇರಮನಿಗೆ ಮಾತುಗೊಟ್ಟಿದ್ದಂತೆ ನಂಬಿಯಣ್ಣನು ಮಹೋದಯ ಪಟ್ಟಣಕ್ಕೆ ಬಂದನು. (ಚೇರಮ ನಂಬಿಯನ್ನು ಇದಿರುಗೊಂಡು ಸತ್ಕರಿಸುವ

ಮುಂದಣ ಭಾಗ ಹರಿಹರನ 'ನಂಬಿಯಣ್ಣನ ರಗಳೆ'ಯನ್ನು ನೆನಪಿಸುತ್ತದೆ.) ಚೇರಮನ ಆತಿಥ್ಯವನ್ನು ಸ್ವೀಕರಿಸಿ ನಂಬಿಯಣ್ಣನಿರುತ್ತ ಒಂದು ದಿನ ಉಪ್ಪರಿಗೆಯಲ್ಲಿ ನಿಂತು ದಿಗವಲೋಕನ ಮಾಡುತ್ತಿರುವಲ್ಲಿ ತಿರುವಂಜಕಳನಾಥ ದೇವಾಲಯ ಕಣ್ಣಿಗೆ ಬಿದ್ದಿತು. ಅಲ್ಲಿಗೆ ನಂಬಿಯಣ್ಣನು ಹೊರಟನು. ಅವನ ಜೊತೆ ಪರವೆ-ಸಂಕಿಲಿನಾಚಿಯರೂ ಹೊರಟರು. ಕೈಲಾಸದಿಂದ ನಂಬಿಗೆ ಐರಾವತವನ್ನೇರಿ ಬರುವಂತೆ ರಾಯಸ ಬಂದಿತು. ಅದನ್ನೋದಿ ಕೈಲಾಸದಿಂದ ಬಂದ ಐರಾವತವನ್ನೇರಿ ನಂಬಿ ಕೈಲಾಸಕ್ಕೆ ನಡೆದನು. ಚೇರಮನು ನಂಬಿಯಣ್ಣನು ಕೈಲಾಸಕ್ಕೆ ತನಗೆ ತಿಳಿಸದೆ ಹೋದನೆಂದು ಕೋಪಗೊಂಡು ತನ್ನ ತೋಳಲ್ಲಿ ಅಳವಟ್ಟಿರ್ದ ಬಾಳನ್ನು ಜಡಿವುತ್ತ ಈಗ ಕೈಲಾಸಕ್ಕೆ ದಾಳಿಯಿಡುವೆನು ನಿಸ್ಸಾಳವನ್ನು ಸೂಳೈಸಿ ಎಂದು ತನ್ನವರಿಗೆ ಆಜ್ಞಾಪಿಸಿದನು. ಎಂಬತ್ತು ಸಾವಿರ ಕುದುರೆಗಳೊಂದಿಗೆ ರುದ್ರಲೋಕಕ್ಕೆ ದಾಳಿಯಿಡಲು ಹೊರಟ ಚೇರಮ ಮಾರ್ಗಮಧ್ಯೆ ನಂಬಿಯಣ್ಣನನ್ನು ಕಂಡನು. ಇರ್ವರೂ ಪರಸ್ಪರ ಪ್ರೀತಿಯಿಂದ ನೋಡಿ ಅಪ್ಪಿಕೊಂಡು ಕೈಲಾಸಕ್ಕೆ ಜೊತೆಗೂಡಿ ಬರುತ್ತಿರುವಲ್ಲಿ ಕೈಲಾಸಕ್ಕೆ ತಲೆಯೂರಿ ಬರುತ್ತಿದ್ದ ಕಾರಿಕಾಲಮ್ಮೆಯನ್ನು ಕಂಡು ಅವರು ಅವಳ ಭಕ್ತಿಯನ್ನು ಹೊಗಳಿದರು.

ಕೈಲಾಸವನ್ನು ಸಿಂಗರಿಸಿ ಗಣನಿಕರದೊಡನೆ ಹೋಗಿ ನನ್ನ ಭಕ್ತರನ್ನು ಸಂಭ್ರಮದಿಂದ ಇದಿರುಗೊಂಡು ಕರೆತರುವಂತೆ ನಂದಿಗೆ ಶಿವನು ಆಜ್ಞಾಪಿಸಿದನು. ಎಲ್ಲರನ್ನೂ ಬಾಗಿಲಲ್ಲಿರಿಸಿ ನಂಬಿಯಣ್ಣನು ಕುರುಂಬರನ್ನು ಕರೆದುಕೊಂಡು ಹೋಗಿ ಶಿವನನ್ನು ಕಂಡು ನಮಿಸಿ ಅವನಿಗೆ ಬಿನ್ನವಿಸಿ ಕುರುಂಬರಿಗೆ ಗಣಪದವಿಯನ್ನು ಕೊಡಿಸಿದನು. ಅನಂತರ, ಚೇರಮ ಬಾಗಿಲಲ್ಲಿ ನಿಂತಿರುವನು, ಅವನನ್ನು ಕರುಣೆಯಿಟ್ಟು ಕರೆಯಿಸುವುದು ಎಂದನು. ಚೇರಮನು ಮರ್ತ್ಯದಲ್ಲಿ ಪರಮ ಭಕ್ತಿಯಿಂದ ಮಾಡುತ್ತಿದ್ದ ಸೇವೆಗಳಿಗೆ ನಾವು ಅಡ್ಡಿಮಾಡಿ ಕೈಲಾಸಕ್ಕೆ ಬರುವಂತೆ ಹೇಳಿದೆವೆ? ಎಂದು ಶಿವನು ನುಡಿಯಲು ಅದಕ್ಕೆ ನಂಬಿಯು, 'ದೇವಾ, ತಾನು ಬರೆದ ಶ್ರೇಷ್ಠಕಾವ್ಯವನ್ನು ನಿಮ್ಮ ಮುಂದೆ ಓದಿ ನಿಮಗೆ ಬಿನ್ನವಿಸಬೇಕು' ಎಂದು ಬಂದಿರುವನು ಎಂದನು. 'ಹಾಗಾದರೆ, ನನ್ನ ಆಜ್ಞೆಯಿಲ್ಲದೆ ಬಂದ ಅವನಿಗೆ ನೀನು ಉಪದೇಶವಿತ್ತು ನಂದಿಯೊಡನೆ ಬಾ' ಎಂದು ಶಿವನು ಆಜ್ಞೆ ಮಾಡಲು ನಂಬಿಯು ಅಂತೆಯೇ ಮಾಡಿ ಚೇರಮನನ್ನು ಶಿವನ ಎದುರಿಗೆ ನಿಲ್ಲಿಸಿ

ದನು. ಶಿವನ ಪಾದಗಳಿಗೆ ಸಾಷ್ಟಾಂಗವೆರಗಿ ಕೈಮುಗಿದು ನಿಂತ ಚೇರಮನನ್ನು ಶಿವನು ಅಪ್ಪಿಕೊಂಡು ಮುಂಡಾಡಿದನು. ಶಿವ ನಂಬಿಯಣ್ಣನಿಗೆ ಅವನ ಹಿಂದಣ ಜನ್ಮದ ಗಣಪದವಿಯನ್ನು ಅನುಗ್ರಹಿಸಿ ತುಂಬುರ, ವಿಚಾರಪರ ಇವರೇ ಮೊದಲಾದವರನ್ನೂ ಚತುರಂಗಸೇನೆಯನ್ನೂ ರುದ್ರಲೋಕದಲ್ಲಿರಿಸಿ ಚೇರಮನ ಸತ್ಕಾವ್ಯವನ್ನು ಕೇಳಿದನು. ಆ ದಿವ್ಯಕಾವ್ಯವನ್ನು ಕೇಳಿ ಆನಂದಿಸುತ್ತ ಶಿವನು ಚೇರಮನನ್ನು ಬಾರೆನ್ನ ಬೊಪ್ಪ ಎಂದು ಹತ್ತಿರ ಕರೆದು ಅಡಿಗಡಿಗೆ ಮುದ್ದಿಸುತ್ತ ಅವನಿಗೆ ಗಣಪದವಿಯನ್ನು ಇತ್ತನು (೧೧. ೩೩–೭೮).

ಕುಮಾರ ಚೆನ್ನಬಸವನು (೧೫೫೦) ತನ್ನ 'ಪುರಾತನರ ಚರಿತೆ'ಯಲ್ಲಿ ಚೇರಮನು ಗಾಯಕನೊಬ್ಬನಿಗೆ ಅಪಾರ ಸಂಪತ್ತನು ಕೊಟ್ಟ ಪ್ರಸಂಗವನ್ನು ಪ್ರಚಲಿತವಿರುವುದಕ್ಕೆ ಸ್ವಲ್ಪ ಭಿನ್ನವಾಗಿ ಹೇಳಿರುವನು. ಅವನು ಹೇಳುವಂತೆ, ರಾಗರಸಾಂಕನೆಂಬ ಗಾಯಕನು ಶಿವನಿಗೆ ನಿಯಮದಿಂದ ಗೀತವನ್ನು ಅರ್ಪಿಸುತ್ತಿದ್ದನು. ಅವನೊಡನೆ ವಾದಮಾಡಲೆಂದು ಗೌಳದೇಶದಿಂದ ಸಂಗೀತಗಾರರು ಬಂದರು. ಅದನ್ನು ತಿಳಿದ ಶಿವನು ಸೌದೆಯ ಹೊರೆಯನ್ನು ಶಿರದಲ್ಲಿ ಹೊತ್ತುಕೊಂಡು ಬಂದು ಆ ಸಂಗೀತಗಾರರ ಮುಂದೆ ಚೆನ್ನಾಗಿ ಹಾಡಲು ಅದನ್ನು ಕೇಳಿ ಮೆಚ್ಚಿದ ಅವರು ಹುಸಿವೇಷದ ಶಿವನನ್ನು ಸಂಗೀತವನ್ನು ಯಾರಲ್ಲಿ ಕಲಿತೆ ಎಂದು ಕೇಳಿದರು. ರಾಗರಸಾಂಕನಲ್ಲಿ ಸಂಗೀತ ಕಲಿತೆ ಎನ್ನಲು ಸಂಗೀತಗಾರರೆಲ್ಲ ಅವನಲ್ಲಿಗೆ ಹೋಗಿ ಅವನನ್ನು ಹೊಗಳಿ ವಂದಿಸಿ ಹೋದರು. ಹೀಗಿರಲು ಒಂದು ದಿನ ರಾಗರಸಾಂಕನ ಹೆಂಡತಿ ಮನೆಯಲ್ಲಿ ಏನೂ ಇಲ್ಲವೆಂದು ಗಂಡನಿಗೆ ತಿಳಿಸಲು ರಾಗರಸಾಂಕನು ಅದನ್ನು ಶಿವನಿಗೆ ಬಿನ್ನವಿಸಿದನು. ಶಿವನು ಚೇರಮನಿಗೆ ಕಾಗದವೊಂದನ್ನು ಬರೆದುಕೊಟ್ಟು ಅದನ್ನು ಚೇರಮನಿಗೆ ಕೊಡುವಂತೆ ಹೇಳಿದನು. ಚೇರಮನು ಅದನ್ನು ಓದಿನೋಡಿ ಸಂತಸಗೊಂಡು ರಾಗರಸಾಂಕನಿಗೆ ಅಪಾರವಾದ ಸಂಪತ್ತನ್ನು ಕೊಟ್ಟು ನಿನ್ನ ಇಷ್ಟಾರ್ಥವನ್ನು ಬಚ್ಚಿಡದೆ ಹೇಳು ಎಂದನು. ವಿಭೂತಿ ತನಗೆ ಪ್ರಿಯವೆಂದು ಹೇಳಿ ಅದನ್ನೇ ತೆಗೆದುಕೊಂಡು ಮನೆಗೆ ರಾಗರಸಾಂಕನು ಬಂದನು. ಆಗ ಅವನ ಹೆಂಡತಿ ಗಂಡನ ಮೂರ್ಖತನವನ್ನು ನೋಡಿ ಅವನನ್ನು ನಿಂದಿಸಲು ಒಡನೆಯೇ ರಾಗರಸಾಂಕನು ಶಿವನಲ್ಲಿ ಐಕ್ಯವಾದನು (೧. ೩೧–೩೨).

ಕುಮಾರ ಚೆನ್ನಬಸವನು ತನ್ನ ಕೃತಿಯಲ್ಲಿ ಮತ್ತೆ ಎರಡು ಕಡೆ ಚೇರಮನ ಬದುಕಿಗೆ ಸಂಬಂಧಿಸಿದ ಕಥೆ ಹೇಳಿರುವನು. ೧. ಚೇರಮನು ನಂಬ್ಯಣ್ಣನೆಡೆಗೆ ಬರಲು ಸಂತಸದಿಂದ ಆರೋಗಣೆಯ ಮಾಡಿ ಪಾಯಸವನ್ನು ಬಡಿಸಲು ಆಗ ಚೇರಮನು ಶಿವನ ನಾಟ್ಯವನ್ನು ಕಂಡಲ್ಲದೆ ನಾನು ಪಾಯಸವನುಣ್ಣೆನೆಂದನು. ತಾಳವನ್ನು ಭೋರನೆ ಹಿಡಿದು ನಂಬಿಯು ಹಾಡಲು ಶಿವನು ಕುಣಿದನು. ಆಗ ಚೇರಮನು ಶಿವನಿಗೆ ವಂದಿಸಿ, ಗುಂಡಯ್ಯನಲ್ಲಿ ನೀನು ಕುಣಿದ ಸುದ್ದಿ ಕೇಳಿ ನಿನ್ನ ನಾಟ್ಯವನ್ನು ನಾನು ನೋಡಲು ಬಯಸಿದೆ ಎಂದು ಹೇಳಿ ಶಿವನ ಕೃಪೆಯನ್ನು ಪಡೆದನು (೨. ೮). ೨. ಚೇರಮನು ಶಿವಾನಂದಾಖ್ಯವೆಂಬ ಕಾವ್ಯವನ್ನು ಸಾರವತ್ತಾದ ವಾಕ್ಯಗಳಿಂದ ರಚಿಸಿ ಅದನ್ನು ಶಿವನಿಗೆ ಅರ್ಪಿಸಲು ಮೆಚ್ಚಿದ ಶಿವನು ಸಮಗದ್ದುಗೆಯನ್ನಿತ್ತು ಅವನಿಗೆ ವರವನ್ನಿತ್ತನು (೫. ೨೬).

ವಿರೂಪಾಕ್ಷ ಪಂಡಿತನು ತನ್ನ 'ಚೆನ್ನಬಸವ ಪುರಾಣ'ದಲ್ಲಿ ನಂಬಿಯಣ್ಣನು ಪೆರುಮಳಲೆಯ ಕುರುಂಬರ ಜೊತೆಗೂಡಿ ಶಿವಪುರಕ್ಕೆ ಹೋದನೆಂಬ ಸುದ್ದಿಯನ್ನು ಕೇಳಿ ಚೇರಮನು ಭೂಮಿ, ಭಂಡಾರವನ್ನು ತಿರುನೀಲಕಂಠಪಾಣರಿಗೆ ಕೊಟ್ಟು ಕೈಲಾಸಕ್ಕೆ ಸಂತಸದಿಂದ ದಾಳಿಮಾಡಿದನು ಎಂದಿರುವನು (೫೫.೨೫-೨೬). ಮುಖಬೋಳು ಸಿದ್ಧರಾಮನು (೧೫೯೬) ತನ್ನ 'ಪಟ್ಟಸ್ಥಲ ತಿಲಕ'ದಲ್ಲಿ ರಾಜೇಂದ್ರಚೋಳ, ಚೇರಮ, ಪಾಂಡ್ಯರು ಅಮರೇಂದ್ರನೊಡನೆ ಕಾದಿ ಶಿವ ಪದವನ್ನು ಹೊಂದಿದರು-ಎಂದಿರುವನು (೪.೨೨). ಈ ಘಟನೆಯ ಬಗೆಗೆ ವಿವರಗಳೇನನ್ನೂ ಕವಿಯು ನೀಡಿಲ್ಲ. ಷಡಕ್ಷರಿಯ (೧೬೫೬) 'ಬಸವರಾಜ ವಿಜಯಂ'ವು ಪಾಲ್ಕುರಿಕೆ ಸೋಮನಾಥ, ಭೀಮಕವಿ-ಇವರ ಬಸವಪುರಾಣವನ್ನು ಆಧರಿಸಿರುವುದರಿಂದ ಮೂಲದಲ್ಲಿ ಬಂದಿರುವಂತೆ ಚೇರಮನ ಬಗೆಗಿನ ಉಲ್ಲೇಖಗಳು ವ್ಯತ್ಯಾಸವಿಲ್ಲದೆ ಇಲ್ಲೂ ಕಂಡುಬರುತ್ತವೆ.

**ಶಂಕರದೇವ :**

ಶಂಕರದೇವನ (ಸು. ೧೬೫೦) 'ಪ್ರಸನ್ನ ಶಂಕರಲಿಂಗ ರಗಳೆ'ಗಳು ಎಂಬ ಕೃತಿಯಲ್ಲಿ ಕವಿಯು ಚೇರಮನ ಕಥೆಯನ್ನು ಪ್ರತ್ಯೇಕವಾಗಿ ರಗಳೆಯ ರೂಪದಲ್ಲಿ ಹೇಳಿರುವನು. ಅಲ್ಲಿ ಬರುವ ಕಥೆಯನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು :

ಮಲೆಯ ದೇಶದ ಮಧ್ಯಭೂಮಿಯಲ್ಲಿ ಕುಡುಗಲೂರೆಂಬ ಪಟ್ಟಣ. ಇದರ ಅಧಿಪತಿಯಾದ ಚೇರಮನು ಶಿವಭಕ್ತಿ ಚರಿತನು. ಒಮ್ಮೆ ಚೇರಮನಿಗೆ ಶೈವಾಗಮಿಕನೋರ್ವನು ಹಿಂದೆ ಮೆರೆದ ಭಕ್ತರ ಚರಿತೆಯನ್ನು ಹೇಳಿ ನಂಬಿಯ ಮಹಿಮೆಯನ್ನು ತಿಳಿಯಪಡಿಸುವನು. ಅದನ್ನು ಕೇಳಿ ಅಚ್ಚರಿಗೊಂಡ ಚೇರಮನು ನಂಬಿಯಣ್ಣನನ್ನು ಕಾಣಲು ಸಂಭ್ರಮದಿಂದ ಬರುವನು. ಪೂಜ ನಾಡುತ್ತಿದ್ದ ನಂಬಿಯನ್ನು ಕಂಡು ಸೋಜಿಗಪಡುತ್ತ ಭಯಭಕ್ತಿಯಿಂದ ಅವನಿಗೆ ನಮಿಸಿ ನಿಂತ ಚೇರಮನನ್ನು ಲಕ್ಷ್ಯಕ್ಕೆ ತಂದುಕೊಳ್ಳದೆ ನಂಬಿಯು ಪೂಜೆ ನಲ್ಲಿರಲು ಚೇರಮನು ಕೋಪಗೊಂಡು ಶಿವನು ನಂಬಿಗೆ ಕುಂಟಣಿತನ ಮಾಡು ವುದನ್ನು, ನಿತ್ಯವೂ ಸಾವಿರ ಹೊನ್ನನ್ನು ಕೊಡುವುದನ್ನು ನಿಲ್ಲಿಸುವೆನು, ಅವನ ಅಹಂಕಾರವಾರಾಸಿಯನ್ನು ಕಲಕುವೆನು, ಎಂದು ತೀರ್ಮಾನಿಸಿ ಶಿವನಲ್ಲಿಗೆ ಬರುವನು. ಶಿವನಿಗೆ ಕೈಮುಗಿದು ನಿಂತ ಚೇರಮನು ಇಂತಹ ಕಾಮಿಗಳಿಗೆ, ವ್ಯಸನಿಗಳಿಗೆ ಒಲಿವರೇ ಶಶಿಧರಾ ! ಆದಿರಲಿ, ನನ್ನ ಹೇಳಿಕೆಯಿಲ್ಲದೆ ಇನ್ನು ಅವನಿಗೆ ನೀನು ಕೊಡುವ ಪಡಿಯನ್ನು ಕೊಟ್ಟರೆ ನಿನಗೆ ನಿನ್ನಾಣೆ, ನಿನ್ನ ನಚ್ಚಿನ ಭಕ್ತರುಗಳಾಣೆ, ಎನ್ನಾಣೆ, ಗಂಗೆ–ಗೌರಿ ದೇವಿಯರಾಣೆ ಎಂದು ಆಣೆಯಿಡು ವನು. ಆಣೆ ಕೇಳಿ ನಡುಗಿದ ಶಿವನು, ಇನ್ನವನ ಮೊಗವ ನೋಡೆನು, ಪಡಿಯ ಕೊಡೆನು ಇದಕ್ಕೆ ನಿನ್ನಾಣೆ. ನೀನವರ ತಂದೆ ತಾಯಿಗಳ ಮಾಠಕೆ ಹೋಗಿ ಇಂದಾದ ವೃತ್ತಾಂತವನ್ನು ತಿಳಿಸಿ ನಿಮ್ಮೂರಿಗೆ ಹೋಗು ಎಂದನು. ಹಾಗೆಯೇ ಮಾಡಲು, ನಂಬಿಯಣ್ಣನ ಮಾತಪಿತರು ಒಲಿದು 'ತಂದೆ ಲೇಸಾಯ್ತು ನಿಮ್ಮಿಂದವನ ಹಮ್ಮಳಿದುದು' ಎಂದು ಚೇರಮನನ್ನು ಬೀಳ್ಕೊಂಡರು.

ಚದುರೆ ಪರವೆನಾಚಿಯು ಪಡಿ ಉಳಿದುದೆಂದು ಅಲವುತ್ತಿರಲು ನಂಬಿಯು ಶಿವನಿಳಯಕ್ಕೆ ಬಂದು ವಂದಿಸಿ ಪಡಿವೊಂಗಳನ್ನು ಶಿವನಲ್ಲಿ ಬೇಡಲು ಶಿವನು ಮೌನ ಧರಿಸಿದನು. ನಂಬಿಯು ಪರಿಪರಿಯಾಗಿ ಬೇಡಿದರೂ ಶಿವ ಮೌನವನ್ನು ಮುರಿಯಲಿಲ್ಲ. ಆಗ ನಂಬಿಯು ಕಣ್ಣೀರ್ಗರೆಯುತ್ತ ತನ್ನ ತಾಯಿತಂದೆಯರ ಬಳಿಗೆ ಬಂದು ತನ್ನೊಡನೆ ಉಮಾವರನು ಮುಖಮುರಿದು ಮೌನವನ್ನು ಮುಂದಿಟ್ಟು ಮಾತನಾಡದಿರುವುದನ್ನು ತಿಳಿಸಿದನು. ಅವರು ಮಗನಿಗೆ ಚೇರಮನನ್ನು ಉದಾಸೀನ ಮಾಡಿದ್ದರ ಪ್ರತಿಫಲವಿದೆಂದು ಹೇಳಿ, ಚೇರಮನ

ಬಳಿಗೆ ಹೋಗಿ ಅವನ ಪಾದಗಳಿಗೆ ತಲೆಬಾಗು, ಪುರಹರನು ನಿನಗೆ ಪಡಿಯನ್ನು ಕೊಡುವನು ಎಂದು ಸಲಹೆ ನೀಡಿದರು. ನಂಬಿಯಣ್ಣನು ಚೇರಮನನ್ನು ಕಾಣಲು ಹೊರಟನು. ಸುದ್ದಿ ತಿಳಿದ ಚೇರಮನು ಯುಕ್ತಿಯಿಂದ ಪುರವನ್ನು ಸಿಂಗರಿಸಿದನು. ನಂಬಿಯಣ್ಣನನ್ನು ವೈಭವದಿಂದ ಇದಿರುಗೊಂಡ ಚೇರಮ ಅವನನ್ನು ತನ್ನರಮನೆಗೆ ಕರೆದುತಂದು ಏಕಾಂತದಲ್ಲಿ ನಿಮ್ಮಂತೆ ಹಮ್ಮಳಿದ ಶಿವಭಕ್ತರಿರುವರೆ? ಹಾಗಿಲ್ಲದಿದ್ದರೆ ಚಂದ್ರಶೇಖರನು ನಿಮಗೆ ಪ್ರೀತಿಯಿಂದ ಪಡಿಯನ್ನು ಕೊಡುತ್ತಿದ್ದನೆ ? ನಿಮಗೆ ವೆಚ್ಚಕ್ಕೆ ನಿತ್ಯವೂ ಸಾವಿರ ಹೊನ್ನನ್ನು ಕೊಡುವುದು ಲೋಕಕ್ಕೆ ಅಚ್ಚರಿ ! ಆಗದಾಗದು. ನಿಮಗಲ್ಲದೀ ಮಹಿಮೆ ಉಳಿದವರಿಗೆ ಸಾಧ್ಯವೆ ? ನಮ್ಮಂಥವರಿಗೆ ಸಾಧ್ಯವೆ ? ಅಯ್ಯಯ್ಯೊ ನಾವೊಬ್ಬ ಭಕ್ತರೆ, ಯುಕ್ತರೆ ? ಎಂದು ಭಯಭಕ್ತಿಯಿಂದ ನುಡಿಯಲು ನಂಬಿಯಣ್ಣನು ಭಯಗೊಂಡು ತಲೆಬಾಗಿ ನೆಲದಲ್ಲಿ ಬರೆವುತ್ತ ನಾಚಿ ತನ್ನ ತಪ್ಪನ್ನು ಕ್ಷಮಿಸುವಂತೆ ಪ್ರಾರ್ಥಿಸಿ ಪಾದಗಳಿಗೆ ನಮಿಸಿದನು. ಚೇರಮನು ಎರಡೂ ಕೈಗಳಿಂದ ನಂಬಿಯ ಶಿರವಿಡಿದೆತ್ತಿ ಮನದಲ್ಲಿ ತಿಳಿವನ್ನು ಮೂಡಿಸಿ ಪಡಿಯ ತಡಹನ್ನು ಬಿಟ್ಟು ಮೇಲಿಂದ ಮೇಲೆ ಮನ್ನಿಸಿ ಕೈಮುಗಿದು, ಕೈಲಾಸಕ್ಕೆ ಹೋಗುವ ಮುನ್ನ ನನಗೆ ಹೇಳಿ ಹೋಗೆಂದು ನುಡಿದು ನಂಬಿಯಿಂದ ನಂಬುಗೆಪಡೆದು ಅವನನ್ನು ಬೀಳ್ಕೊಂಡನು.

ಶಿವನು ಕೈಲಾಸಕ್ಕೆ ನಂಬಿಯಣ್ಣನನ್ನು ಕರೆಯಿಸಬೇಕೆಂದು ನಂದೀಶ, ವೀರಭದ್ರರನ್ನು ಕಳುಹಿಸಲು ಅವರು ನವಮಣಿಗಳಿಂದಾದ ಪುಷ್ಪಕವನ್ನು ಸಿದ್ಧಪಡಿಸಿ, ಗಣಕುಲ ರುದ್ರಗಣಿಕೆಯರುಗಳೊಡನೆ ತಿರುವಾರೂರಿಗೆ ಬಂದು, ನಂಬಿಯನ್ನು ಕಂಡು 'ದೇವಾ, ಚೇರಮನು ತೈಲಾಭ್ಯಂಜನ ಮಾಡುತ್ತಿರುವನು, ಅವನನ್ನು ಕಾಣಲು ಸಮಯವಿಲ್ಲ'ವೆನ್ನುವರು. ಅದಕ್ಕೆ ನಂಬಿಯು 'ಅಯ್ಯೋ ಚೇರಮನಿಗೂ ನನಗೂ ಘನ ಶಪಥವುಂಟು. ಪುಸಿಯಲಾಗದು. ಇವನಿಗೆ ಹೇಳಲು ಸಮಯವಿಲ್ಲ, ಹೊತ್ತು ಹೋಗುತ್ತಿದೆ. ವಿಮಲ ಭಕ್ತರ ಕೂಡೆ ನುಡಿದು ಹುಸಿವುದು ನೀತಿಯಲ್ಲ' ಎಂದು ಯೋಚಿಸಿ ದ್ವಾರಪಾಲಕರೊಡನೆ 'ಕೈಲಾಸಪುರಕ್ಕೆ ಹೋಗುತ್ತ ನಂಬಿಯಣ್ಣನು ವಿಷಯ ತಿಳಿಸಲು ಬಂದು ನಿಮ್ಮ ಸಮಯವನ್ನು ಪಡೆಯದೆ ಕೈಲಾಸಕ್ಕೆ ಹೋದ'ನೆಂದು

ಚೇರಮನಿಗೆ ಹೇಳುವಂತೆ ತಿಳಿಸಿದನು. ಅದಕ್ಕೆ ಅವರು ತಪ್ಪದೆ ನಮ್ಮ ಒಡೆಯನಿಗೆ ಹೇಳುತ್ತೇವೆ ಹೋಗಿ ಎನ್ನಲು ನಂಬಿಯಣ್ಣನು ಪುಷ್ಪಕವನ್ನು ಏರಿದನು.

ಇತ್ತ ಚೇರಮನೃಪನು ಸ್ನಾನಮಾಡಿ ಶಿವನ ಪ್ರಸಾದಾಮೃತವನ್ನು ಧರಿಸಿ ಹರುಷದಿಂದ ಬಂದು ಓಲಗಗೊಟ್ಟಿರಲು ದ್ವಾರಪಾಲಕರು ಬಂದು ನಂಬಿಯು ಕೈಲಾಸಕ್ಕೆ ಹೋದುದನ್ನು ತಿಳಿಸುವರು. ಆ ಸುದ್ದಿ ಕೇಳಿ ಮನಗುಂದಿ ಕಂದಿ ಕಡುನೊಂದು 'ಭಕ್ತಗೊಂದೇ ಭಾಷೆ ಬಾಳೆಗೊಂದೇ ಫಲಂ' ಇದನರಿದು ನಡೆಯದಿದ್ದರೆ ಅದುವೆ ನಿಷ್ಫಲವೆಂದು ಭಾವಿಸಿ ರಜತಾದ್ರಿಗೆ ದಾಳಿಮಾಡಲು ತೀರ್ಮಾನಿಸಿದನು. ಕೈಲಾಸದತ್ತ ಬರುತ್ತಿರುವ ಸೈನ್ಯವನ್ನು ನೋಡಿದ ನಾರದನು ಭಯಗೊಂಡು ಶಿವನಲ್ಲಿಗೆ ಬಂದು ಚೇರಮನು ಕೈಲಾಸವನ್ನು ಸೂರೆಗೊಳ್ಳಲು ಬರುತ್ತಿರುವನೆಂದು ತಿಳಿಸುವನು. ಶಿವನು ಅಷ್ಟದಿಕ್ಪಾಲರನ್ನು ಕರೆದು ಚೇರಮನೊಡನೆ ನೀವು ಹೋರಾಡಿ ಎಂದು ಹೇಳಿ ತಾನು ಬೇಗನೆ ತಪಸಿಯ ವೇಷವನ್ನು ಧರಿಸಿ ಚೇರಮನಲ್ಲಿಗೆ ಬಂದು ಅವನನ್ನು ಹರಸಿ ವಿಭೂತಿಯನ್ನು ಕೊಟ್ಟು ನೀನು ಯಾವ ದಿಕ್ಕಿಗೆ ಹೋಗುತ್ತಿರುವೆ ? ಎಂದು ಕೇಳುವನು. ಚೇರಮನು ಕೈಲಾಸ ನಗರಕ್ಕೆ ದಾಳಿಮಾಡಲು ಬಂದಿರುವೆ ಎನ್ನಲು ಶಿವ ಅವನ ಶೌರ್ಯಕ್ಕೆ ಅಚ್ಚರಿಗೊಂಡು ಅದು ಹೇಳುವಷ್ಟು ಸುಲಭದ ಕೆಲಸವಲ್ಲವೆಂದು ನಾನಾ ಬಗೆಯಾಗಿ ಹಿತಬೋಧೆ ಮಾಡುವನು. ಪಾಶುಪತಿಯ ಮಾತಿಗೆ ಚೇರಮನು ಹೆದರದೆ 'ದೇವ, ಬೀಡಿನ ಗೂಳಿ ಹಱೆಯ ದನಿಯಂ ಕೇಳ್ದು ಬೇವಸಂಗೊಂಡು ಬೆದಱುವದೆ ಸುರರಂ ಸೀಳ್ದುಬಿಸುಟು ಹರನಗರಿಯಂ ಮುಸುಱೆಯುನ್ನತಿಗೆಡಿಸಿ ಹುಸಿದಸವು ನಂಬಿಯೆಂಬವನ ಬನ್ನಂಬಡಿಸಿ ಹಿಡಿದುತಹೆ' ಎಂದು ಮೊದಲಾಗಿ ನುಡಿಯಲು ತಪಸ್ವಿವೇಷದ ಶಿವನು ಹರುಷವೇರಿ ಹರಸಿ ಕಳುಹಿಸಿದನು. ಮುಂದೆ ತಪೋವನವೊಂದು ಕಾಣಬಂದಿತು. ಅಲ್ಲಿ ಗೊಗ್ಗವ್ವೆಯಿರಲು ಅಲ್ಲಿಗೆ ಚೇರಮನು ಬಂದು ಕಾಣಿಕೆಗೊಟ್ಟು ಸಾಷ್ಟಾಂಗ ನಮಸ್ಕಾರಮಾಡಿ ತಾನು ಸೈನ್ಯದೊಂದಿಗೆ ಬಂದ ಕಾರಣವನ್ನು ತಿಳಿಸುತ್ತಾ, ನಂಬಿ ಎನ್ನುವವನು ಹುಸಿದು ಶಿವಪುರಕ್ಕೆ ಹೋಗಲು ಕೋಪಗೊಂಡು ನಾನು ಬೆಂಬಿಡದೆ ಬಂದೆನು. ಆತನ ಮೇಲೆ ದಾಳಿಮಾಡಲು

ಕೈಲಾಸಕ್ಕೆ ಹೋಗಲು ನನಗೆ ದಾರಿಯನ್ನು ತೋರಬೇಕು ಎಂದು ಪ್ರಾರ್ಥಿಸಿದನು. ಗೊಗ್ಗವ್ವೆಯು ಕೈಲಾಸವನ್ನು ತೋರಿದಳು. ಚೇರಮನ ಸೈನ್ಯಕ್ಕೂ ಅಮರಸೈನ್ಯಕ್ಕೂ ಘೋರಯುದ್ಧ ನಡೆಯಿತು. ಚೇರಮನು ಕೈಲಾಸನಗರದ ದಾರವಟ್ಟದಲ್ಲಿ ನಿಂತು ನಂಬಿಯಣ್ಣನನ್ನು ಒಪ್ಪಿಸುವಂತೆ ನಿಮ್ಮ ಶಿವನಿಗೆ ಹೇಳಿ, ಹಾಗೆ ತಂದೊಪ್ಪಿಸದಿದ್ದರೆ ನಿಮಿಷದಲ್ಲೇ ಕೈಲಾಸಪುರವನ್ನು ಸೂರೆಗೊಂಬೆನು ಎಂದು ಆರ್ಭಟಿಸಿದನು. ಶಿವನ ಕಿಂಕರರು ಶಿವನಲ್ಲಿಗೆ ಬಂದು ನಂಬಿಯನ್ನು ರಾಯಚೇರಮನು ಬೇಡುತ್ತಿರುವನು ಎಂದು ಹೇಳಲು, ಆ ಮಾತು ಕೇಳದೆ ಶಿವನು ನಂದೀಶ, ಭೃಂಗಿ, ವೀರೇಶರುಗಳನ್ನು ಹತ್ತಿರ ಕರೆದು 'ಇಂದು ನಮ್ಮ ಮಗ ಚೇರಮನು ಬರುತ್ತಿರುವನು. ಅವನನ್ನು ವೈಭವದಿಂದ ಇದಿರುಗೊಂಡು ಜೊತೆಯಲ್ಲಿಯೇ ಕರೆದುಕೊಂಡು ಬರುವುದು' ಎಂದನು. ಅವರು ಹಾಗೆಯೇ ಮಾಡಿ ಚೇರಮನನ್ನು ಶಿವನಿಗೆ ಕಾಣಿಸಲು, ಶಿವನು ನಂದೀಶನಿಂದ ಅನುಗ್ರಹವನ್ನು ಮತ್ತೆ ಮಾಡಿಸಿ ಶರಣ ಸಮಕ್ಷಮದಲ್ಲಿ ಶೈವವ ಬಿಡಿಸಿ ಅವನನ್ನು ವೀರಶೈವನನ್ನಾಗಿಸಿ ಚೇರಮನ ಗುಣಗಾನಮಾಡಿ ನಂಬಿ-ಚೇರಮರನ್ನು ಒಂದುಗೂಡಿಸಿ ಅವರಿಗೆ ಗಣಪದವನ್ನೂ ಚೇರಮನೊಡನೆ ಬಂದ ಸೈನ್ಯಕ್ಕೆ ಸುರಪದವಿಯನ್ನೂ ಕೊಟ್ಟು ಶೋಭಿಸಿದನು.

ಶಾಂತಲಿಂಗದೇಶಿಕನ (೧೬೭೨) 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ'ದಲ್ಲಿ (ಭಾಗ ೧ ಮತ್ತು ೨) ಚೇರಮನ ಬದುಕಿಗೆ ಸಂಬಂಧಿಸಿದ ಹಲವು ಘಟನೆಗಳ ಉಲ್ಲೇಖವಿದೆ. ಇವು ಇಲ್ಲಿ ಸಕ್ರಮವಾಗಿ ನಿರೂಪಣೆಗೊಂಡಿಲ್ಲ. ಕವಿಗೆ ಚೇರಮನ ಜೀವಿತ ವೃತ್ತಾಂತವನ್ನೆಲ್ಲ ಹೇಳುವ ಉದ್ದೇಶವಿಲ್ಲ. ತನ್ನ ಉದ್ದೇಶಕ್ಕೆ ಎಷ್ಟುಬೇಕೋ ಅಷ್ಟನ್ನು ಮಾತ್ರ-ಚೇರಮನ ಬದುಕಿಗೆ ಸಂಬಧಿಸಿದುದನ್ನು-ಹೇಳಹೊರಟಿರುವನು.

ಮಧುರೆಯ ಸೌಂದರಪಾಂಡ್ಯ, ಕಾಂಚಿಪುರದ ರಾಜೇಂದ್ರಚೋಳ ಹಾಗೂ ಕೇರಳ ದೇಶದ ಮಹೋದಧಿಪುರದ ಚೇರಮರಾಯ-ಇವರ ಕಥೆ :

ಸೌಂದರಪಾಂಡ್ಯ, ರಾಜೇಂದ್ರಚೋಳ ಹಾಗೂ ಚೇರಮರಾಯ, ಈ ಮೂವರು ಶಿವಭಕ್ತಿನಿಷ್ಠೆಯಿಂದಿರುತ್ತ, ಸ್ವಲೀಲೆಯಿಂದ ತಮ್ಮ ವೈಹಾಳಿ

ಯೊಡನೆ ಬ್ರಹ್ಮ ವಿಷ್ಣು ದೇವೇಂದ್ರ ಮೊದಲಾದ ಲೋಕಗಳಿಗೆ ಹೋಗಿಬರುತ್ತ ಪೊನ್ನಾಂಬಲವೆ ಕೈಲಾಸವೆಂದು ನಿತ್ಯವೂ ತಪ್ಪದೆ ಬಂದು ಚಿದಂಬರೇಶ್ವರನನ್ನು ಓಲೈಸಿ ಶಿವಭಕ್ತಿಯನ್ನು ಮೆರೆವುತ್ತಿದ್ದರು. ಒಂದು ದಿನ ಇವರು ದೇವೇಂದ್ರನ ಸಭೆಗೆ ಹೋಗಿ ಸುರಪತಿಯೊಡನೆ ಮಾತಾಡಿ ಬರುತ್ತಿರಲು, ಸುರಪನು ಇವರು ನರಲೋಕದರಸುಗಳು, ನನ್ನ ಪಟ್ಟಣವನ್ನು ಪ್ರವೇಶಿಸಿ ನನಗೆ ವಂದಿಸದೆ ದಿಟ್ಟತನದಿಂದ ಹೋಗುವರಲ್ಲಾ ಎಂದು ಮತ್ಸರಿಸಿ ಅಮರಾವತಿಯ ಗೋಪುರದ ಮೇಲೆ ತನ್ನ ಹಾವುಗೆಗಳನ್ನು ಕಟ್ಟಿಸಿ ಇವರು ಅದರೊಳಗೆ ಹೊಕ್ಕು ಹೋದರೆ ನನಗೆ ವಂದಿಸಿದ ಹಾಗೆ ಎಂದು ನಿಶ್ಚಯಿಸಿದನು. ಮೂವರು ಅರಸರೂ ಇದನ್ನು ಕಂಡು ಕೆರಳಿ, ಗೋಪುರದ ಮೇಲೆ ತಮ್ಮ ಕುದುರೆಯನ್ನು ಹಾರಿಸಿಕೊಂಡು ಹೋಗಿ ಆ ಪುರಪ್ರವೇಶ ಮಾಡಿದರು. ಇದರಿಂದ ಕೋಪ ಗೊಂಡ ಸುರಪನು ಈ ಮೂವರು ರಾಯರ ದೇಶಕ್ಕೆ ಮಳೆಯಿಲ್ಲದಂತೆ ಮಾಡಿದನು. ಇದಕ್ಕೆ ಹೆದರದ ಇವರು ದೇವಲೋಕಕ್ಕೆ ದಾಳಿಮಾಡಿ ನಕ್ಷತ್ರ ಗಳನ್ನು ಸೆರೆಹಿಡಿದರು. ತಮ್ಮ ಮೇಲೆ ದೇವೇಂದ್ರ ದಂಡೆತ್ತಿ ಬರುವನೆಂದು ಯೋಚಿಸಿ ಸೌಂದರಪಾಂಡ್ಯನು ಚೊಕ್ಕನೈನಾರಿಗೆ ಸಿಂಧುದೇಶದ ಕುದುರೆಗಳನ್ನು ತರಿಸಲು ಧನವನ್ನು ಕೊಟ್ಟನು. ಆ ಧನವನ್ನು ಚೊಕ್ಕನೈನಾರು ಜಂಗಮಾ ರ್ಚನೆಗೆ ವಿನಿಯೋಗಿಸಿ ಚಿಂತಿಸುತ್ತಿರುವಾಗ ಶಿವನ ಆದೇಶದಂತೆ ಚೊಕ್ಕನೈನಾರು ನರಿಯನ್ನು ಹಿಡಿದು ತಂದು ಕುದುರೆಯಾಗಿ ಮಾಡಿದನು. ಇಂದ್ರನ ಜೊತೆ ಹೋರಾಡಿ ಅವನನ್ನು ಬಂಧಿಸಲು, ಬೃಹಸ್ಪತಿ ಇಂದ್ರನಿಗೆ ಹಿತವನ್ನು ಬೋಧಿಸಿ ಮೂವರು ರಾಯರಿಗೆ ಅವನು ಶರಣು ಹೋಗುವಂತೆ ಮಾಡಿದನು. ಇಂದ್ರನು ನನ್ನದಪರಾಧವೆಂದು ದೈನ್ಯಬಟ್ಟು ನಕ್ಷತ್ರಗಳನ್ನು ಬಿಡಿಸಿಕೊಂಡು ಹೋದನು (ಭೈರಕಾಕ ೧, ಪು. ೧೮೦–೧೫೨).

'ಚೇರಮನಿದಿರೆ ಪುರಾರಿಯಾಡಿದನು' ಎಂಬುದಕ್ಕೆ ಕಥೆ :

ಕೇರಳದೇಶದ ಕುಡುಗಲೂರೆಂಬ ಪಟ್ಟಣದಲ್ಲಿ ಚೇರಮರಾಯನಿದ್ದು ಭಸಿತ ರುದ್ರಾಕ್ಷೆಯನ್ನು ಧರಿಸಿದವರೆ ಶಿವನೆಂದು ವಂದಿಸಿ ಭಕ್ತಿಯನ್ನು ಮಾಡು ತ್ತಿರಲು ಒಂದು ದಿನ ವೈರಾಗ್ಯದಿಂದ ರಾಜ್ಯವನ್ನು ಬಿಟ್ಟು ಹೊರಟನು. ಈ ಸುದ್ದಿಯನ್ನು ಕೇಳಿದ ರಾಜೇಂದ್ರ ಚೋಳ, ನಂಬಿಯಣ್ಣ ರುಗಳು ತಿರುವಂಜಿಕಳ

ನಾಥದಲ್ಲಿ 'ಎಲೆ ಶಿವನೆ, ನಿಮ್ಮ ಪಾದದ ಬಳಿಯಿಂದ ಚೇರಮರಾಯನನ್ನೇತಕ್ಕೆ ಕಳುಹಿಸಿಬಿಟ್ಟಿರಿ' ಎಂದು ಕೇಳಲು ಶಿವನು ಲಿಂಗದೊಳಗಿದ್ದು ಚೇರಮನನ್ನು ಕುರಿತು 'ಎಲೆ ಚೇರಮರಾಯ, ನಿನ್ನನೇನು ಬೇಸರಿಸಿದೆವು. ನೀನು ರಾಜ್ಯ ಬಿಟ್ಟು ಹೋಗುವುದೇಕೆ ? ಎಂದು ಕೇಳಿದನು. ಅದಕ್ಕೆ ಚೇರಮನು 'ನಿಮ್ಮ ನಾಟ್ಯವನ್ನು ತೋರಿದರೆ ಹೋಗಲೊಲ್ಲೆನು ; ತೋರುವವರೆಗೆ ಊಟವ ನೊಲ್ಲೆನು' ಎನ್ನಲು ಶಿವನು ಭಕ್ತನ ಪ್ರೀತ್ಯರ್ಥವಾಗಿ ನೂತನವಾದ ನಾಟ್ಯವ ನ್ನಾಡಿದನು. ಅದನ್ನು ನೋಡಿ ಸಂತುಷ್ಟನಾದ ಚೇರಮನು ನಿತ್ಯವೂ ಹೀಗೆಯೇ ನಾಟ್ಯವನ್ನು ತೋರಿ ಎಂದನು. ಅದಕ್ಕೆ ಶಿವನು 'ನಿತ್ಯವೂ ಕುಣಿದ ಹುಚ್ಚರುಂಟೆ ? ಬೇಕಾದರೆ ನನ್ನ ಪಾದದಂದುಗೆಯ ಧ್ವನಿಯನ್ನು ತೋರುವೆವು' ಎಂದನು. ಅದಕ್ಕೆ ಒಪ್ಪಿದ ಚೇರಮನು ದಿನವೂ ಶಿವನ ಪಾದ ದಂದುಗೆಯ ಧ್ವನಿಕೇಳುತ್ತ, ನಿತ್ಯವೂ ವೀಣೆಯನ್ನು ಬಾರಿಸುತ್ತ ಲಿಂಗಪೂಜೆ ಯನ್ನು ಮಾಡಿ ಜಂಗಮಕ್ಕೆ ನೀಡುತ್ತ ಸುಖದಿಂದಿದ್ದನು (ಭೈರಕಾಕ ೧, ಪು. 253–254).

'ಕೇರಳದೀಶ ನಂಬಿಯುಂದಗಾಣುತ್ತ ನೊಂದ' ಎಂಬುದಕ್ಕೆ ಕಥೆ :

ಕೇರಳರಾಜ್ಯದ ಕುಡುಗಲೂರೆಂಬ ಪಟ್ಟಣದಲ್ಲಿ ಚೇರಮರಾಯನಿರುತ್ತ ಒಂದು ದಿನ ತಿರುವಂಜಿಕಾಳನಾಥಲಿಂಗವನ್ನು ಪೂಜಿಸಲೆಂದು ಆನೆಯನ್ನೇರಿ ಹೋಗುವಾಗ ಅಚ್ಚುಡಿಪುರದಗಸನ ಮೈಮೇಲೆ ಸುಣ್ಣದ ನೀರುಗಂಜಿ ಸಿಡಿದು ಬೆಳ್ಳಗಿರಲು ನೋಡಿ ಭಸಿತವ ಧರಿಸಿದ ಭಕ್ತನೆಂದು ಆನೆಯನಿಳಿದು ಚೇರಮ ಬಂದು ನಮಸ್ಕಾರ ಮಾಡಲು ಅಗಸನು ಹೆದರಿ ತಾನು ಶಿವಭಕ್ತನಲ್ಲ ಅಗಸ ನೆಂದು ನುಡಿದನು. ಅದಕ್ಕೆ ಚೇರಮನು 'ನಾನು ಕುಲ ನೋಡುವುದಿಲ್ಲ ; ಭಸಿತವ ಧರಿಸಿದವರ ಶಿವನೆಂದು ಕಾಣ್ಬೆ' ಎಂದನು. ಮತ್ತೊಂದು ದಿನ ಭಕ್ತ ನೊಬ್ಬ ಬಂದು ಶಿವಭಕ್ತರ ಮಹಿಮೆಯನ್ನು ಹೊಗಳುತ್ತ ಇಂದು ಶಿವ ನಂಬ್ಯಣ್ಣನ ಹಡಪವ ಹೊರುತ್ತಲಿರುವ ಎಂದನು. ಅದನ್ನು ಕೇಳಿ ಚೇರಮ ನಂಬ್ಯಣ್ಣನನ್ನು, ನೋಡುವೆನೆಂದು ತಿರುವಾಲೂರಿಗೆ ತನ್ನ ಸೈನ್ಯದೊಂದಿಗೆ ಬರುವನು (ಮುಂದಣ ಕಥೆ ಹರಿಹರನ 'ನಂಬಿಯಣ್ಣನ ರಗಳೆ'ಯನ್ನು ಅನುಸರಿಸುತ್ತದೆ). [ಭೈರಕಾಕ ೧, ಪು. 366–367]

ಕುತಾಂಡಿ ದೇವರೆಡೆಗೆ ಚೇರಮ ಹೋಗಲು ಸಮುದ್ರವು ದಾರಿ ಬಿಟ್ಟಿತು ಎಂಬುದಕ್ಕೆ ಕಥೆ :

ಒಂದು ದಿನ ಕುತಾಂಡಿದೇವರ ಪೂಜೆಗೆ ಹೋಗುವಾಗ ಸಮುದ್ರವು ನಾಟ್ಯಮೂರ್ತಿಯನ್ನು ಮುಸುಕಿಕೊಂಡಿದ್ದಿತು. ಆಗ ಚೇರಮರಾಯನು 'ಶಿವನ ಸಖ ನಂಬ್ಯಣ್ಣ, ನಂಬ್ಯಣ್ಣನ ಸಖ ನಾನು, ನನಗೆ ಪ್ರಾಣಸಖವಾದ ಕುತಾಂಡಿದೇವರ ಸಾಗರ ಮುಸುಕಬಹುದೆ?' ಎಂದು ನುಡಿಯಲು ಅವನ ಭಕ್ತಿನಿಷ್ಠೆಗೆ ಹೆದರಿ ವಾರುಧಿ ದಾರಿಯು ಕೊಡಲು ಮುನ್ನ ಹೋಗುವಂತೆ ಹೋಗಿ ತಾಂಡವಮೂರ್ತಿಯ ಪೂಜಿಸಿ, ನಾಟ್ಯವ ನೋಡಿ ದೇವರ ಪ್ರಸಾದವ ನೂಟವ ಮಾಡಿ ತನ್ನೂರಿಗೆ ಬಂದು ಸುಖದಲ್ಲಿದ್ದನು (ಭೈರಕಾಕ ೨, ಪು.139).

ಗೊಗ್ಗವ್ವೆ ಚೇರಮರಾಯನಿಗೆ ಕೈಲಾಸಕ್ಕೆ ದಾರಿಯನ್ನು ತೋರಿದಳು ಎಂಬುದಕ್ಕೆ ಕಥೆ :

ಕುಡುಗಲೂರ ಅರಸು ಚೇರಮರಾಯನು ತನ್ನ ಪರಮ ಮಿತ್ರ ನಂಬ್ಯಣ್ಣನು ತನಗೆ ತಿಳಿಸದೆ ಕೈಲಾಸಕ್ಕೆ ಹೋದನೆಂಬ ಸುದ್ದಿ ಕೇಳಿ ಎಣ್ಣೆದಲೆ ಸಹವಾಗಿ 80,000 ರುದ್ರಾಕ್ಷಿ ಹಕ್ಕರಿಕೆ ಸಂಜೋಗದ ಕುದುರೆಗಳನ್ನು ಏರಿ ದಶ ದಿಕ್ಕಿನಲ್ಲಿ ದಾಳಿಯ ಮಾಡಿ ಕೈಲಾಸದ ದಾರಿ ತಿಳಿಯದೆ ಹುಡುಕುತ್ತಿರಲು ಅವ ರನ್ನು ಕಂಡ ಗೊಗ್ಗವ್ವೆ ಅವರಿಗೆ ಧೂಪವನ್ನು ಹಾಕಿ ಕೈಲಾಸಕ್ಕೆ ದಾರಿಯನ್ನು ತೋರಿದಳು (ಭೈರಕಾಕ ೨, ಪು. 253-254).

ಭದ್ರಗಾಯಕನಿಗೆ ಚೇರಮನು ಭಂಡಾರವನ್ನು ಕೊಟ್ಟನೆಂಬುದಕ್ಕೆ ಕಥೆ :

ಕೇರಳ ದೇಶದಲ್ಲಿ ಕೋಳುಕೋಟೆಯೆಂಬ ಪುರದಲ್ಲಿ ಭದ್ರಗಾಯಕನೆಂಬ ಭಕ್ತನು ಗಾನವಿದ್ಯವನ್ನು ಕಲಿತು ಭಕ್ತರಲ್ಲಿ ರಾಗವನ್ನು ಹಾಡಿ ಧನ-ಧಾನ್ಯವನ್ನು ತಂದು ಜಂಗಮದಾಸೋಹವನ್ನು ಮಾಡುತ್ತಿರಲು, ಅಲ್ಲೊಬ್ಬ ವಿಧವೆಯ ಮಗನು ದರಿದ್ರನಾಗಿರುತ್ತ ತಾಯ ಮಾತನ್ನು ಕೇಳದೆ ಕೂಲಿ ಕಂಬಳವ ಮಾಡದೆ ಭದ್ರಗಾಯಕನ ಮನೆಯ ಮಗ್ಗುಲಿನ ಹಿಂದೆ ತಾಯಿ ಬೈದಾಳೆಂದು ಮುನಿಸುಗೊಂಡು ಬಂದು ಒಂದು ರಾತ್ರಿ ಮಲಗಿದ್ದನು. ಭದ್ರಗಾಯಕನು ರಾತ್ರಿಯಲ್ಲಿ ಸಮಾಸ ರಾಗವನ್ನು ಹಾಡಲು ಅದನ್ನು ಕೇಳಿದ ವಿಧವೆಯ ಮಗನು

ಶ್ರೀರಾಗವನ್ನು ಕಲಿತು ಕೊಂಡನು. ಈ ವಿಷಯ ತಿಳಿದ ಭದ್ರಗಾಯಕನು ಅವನನ್ನು ಕರೆಯಿಸಿ ಕೇಳಲು ಎಲ್ಲವನ್ನೂ ಹೇಳಿದನು. ಭದ್ರಗಾಯಕನು ಅವನಿಗೆ ತಮ್ಮ ರಾಗವನ್ನೆಲ್ಲ ಕಲಿಸಲು ಅವನು ಗಾನವಿದ್ಯಾಸಂಪನ್ನನಾದನು. ಆ ಊರಲ್ಲಿ ಗಂಧರ್ವಭಾರತಿ ಎಂಬ ವೈಷ್ಣವನು ತನ್ನ ಮಗನಿಗೆ ಗಾನವನ್ನು ಕಲಿಸಲು ಅವನಿಗೆ ಅದು ಬರದಿರಲು ಭದ್ರಗಾಯಕನಿದ್ದಲ್ಲಿಗೆ ಬಂದು ನನ್ನ ಮಗನಿಗೆ ಗಾನವಿದ್ಯವ ಕಲಿಸಿದರೆ ನಿಮಗೆ ಹೊನ್ನನ್ನು ಕೊಡುವೆನು ಎಂದನು. ಭದ್ರಗಾಯಕನು ಒಲ್ಲೆನೆನಲು ಅದಕ್ಕೆ ಅವನು 'ಮುಂಡೆಯ ಮಗನಿಗೆ ರಾಗವನ್ನು ಕಲಿಸಿದೆ. ನಾನಿತ್ತ ಹೊನ್ನ ತೆಗೆದುಕೊಂಡು ಕಲಿಸೆಂದರೆ ಒಲ್ಲೆನೆನ್ನುವೆ. ನಿನಗೆ ಮಹಾಲಕ್ಷ್ಮಿಯ ಕರುಣವಿಲ್ಲ' ಎಂದು ದೂಷಿಸಿ ಹೋದನು. ಭದ್ರಗಾಯಕನು ಭಕ್ತರಲ್ಲಿ ಗಾನವನ್ನು ಹಾಡಿದರೆ ಧನಧಾನ್ಯ ಸ್ವಲ್ಪವಾಗಿ ಬರಲು ಆಗ ಅವನ ಸತಿ 'ನಿನ್ನ ಮುಖದಲ್ಲಿ ಕಾಯಕ ಹುಟ್ಟದು. ಹೊನ್ನನಿತ್ತರೆ ಒಲ್ಲೆನೆಂದೆ. ಶಿವ ಕೊಡುವ ಭಾಗ್ಯವೇನು ?' ಎಂದು ಮೂದಲಿಸಿದಳು. ಶಿವನೇ ಕೊಡುವನೆಂದು ನಂಬಿದ ಭದ್ರಗಾಯಕನು ನಿತ್ಯವೂ ಬೆಳಗಿನ ಜಾವಕ್ಕೆ ಎದ್ದು ಲಿಂಗದ ಗುಡಿಗೆ ಹೋಗಿ ರಾಗವನ್ನು ಮಾಡಿ ಬರುತ್ತಿದ್ದನು. ಒಂದು ದಿನ ಅವನ ಹೆಂಡತಿಯು 'ಲಿಂಗದ ಗುಡಿಗೆ ಹೋಗಿ ರಾಗವ ಮಾಡಿ ಬಂದ ನೀನು, ನೀನು ನುಂಗುವ ತುತ್ತಿಗೆ ಬಗೆ ಏನು ?' ಎಂದು ಹಾಸ್ಯವ ಮಾಡಿದಳು. ಆ ಮಾತು ಕೇಳಿ ಮನನೊಂದ ಭದ್ರಗಾಯಕನು ಲಿಂಗದ ಗುಡಿಗೆ ಬಂದು ಗಾನವ ಮಾಡಿ ಸತಿಯ ಬಾಧೆ ಬಹಳವೆಂದು ಲಿಂಗಕ್ಕೆ ಬಿನ್ನೈಸಿದನು. ಆಗ ಲಿಂಗವು ಚೇರಮರಾಯನಲ್ಲಿಗೆ ಹೋಗಿ ಬೇಕಾದಷ್ಟು ದ್ರವ್ಯವ ತೆಗೆದುಕೋ ಎಂದು ತಮ್ಮ ಹೆಸರ ಓಲೆಯ ಬರೆದು ಜನರು ನೋಡುವಂತೆ ಮುಂದಕ್ಕಿಡಲು ಭದ್ರಗಾಯಕನು ಅದನ್ನು ತೆಗೆದುಕೊಂಡು ಚೇರಮರಾಯನಲ್ಲಿಗೆ ಬಂದನು. ಚೇರಮನು ಓಲೆಯನ್ನು ಓದಿ ತನ್ನ ಉಗ್ರಾಣದ ಬಾಗಿಲ ತೆಗೆಯಿಸಿ 'ನಿಮಗೆ ಬೇಕಾದ ವಸ್ತುವ ತೆಗೆದುಕೊಳ್ಳಿ ಎಂದನು. ಭಂಡಾರದ ಮನೆಯ ಒಳಗೆ ಪ್ರವೇಶಿಸಿದ ಗಾಯಕನು ಮುತ್ತು ಮಾಣಿಕ ನವರತ್ನ ಮೊದಲಾದ ಪಟ್ಟು ಪಟ್ಟಾವಳಿ ಅನಂತ ನಗಗಳ ಮುಟ್ಟದೆ ವಿಭೂತಿಯನ್ನು ಕಂಡು ಅದರ ಮಹಿಮೆಯನ್ನು ನುತಿಸಿ ಆಸೆಯಿಂದ ಅದನ್ನು ಮೊಟ್ಟೆಗಟ್ಟಿ ಹೊತ್ತುಕೊಂಡು ಬಂದು ತಮ್ಮ ಸತಿಗೆ ಕೊಟ್ಟನು. 'ಅವನ ಪತ್ನಿಯು ಅದನ್ನು ನೋಡಿ ಮೊಗದಿರುಹಿ

'ಶಿರತುಂಬ ಬೂದಿಯನ್ನೇತಕೆ ತಂದೆ ?' ಎಂದು ಕೋಪದಿಂದ ನುಡಿಯಲು ಆದರ ಮಹಿಮೆಯನ್ನು ಭದ್ರಗಾಯಕನು ತಿಳಿಸಿದನು. 'ಅದು ಸುಳ್ಳು' ಎಂದು ಆಕೆ ನುಡಿಯಲು ಅದಕ್ಕೆ 'ಶಿವಶಿವಾ ! ಭಸ್ಮದ ಮಹಿಮೆ ಸಟೆಯೆ ? ಕಯ್ಯನಿಕ್ಕಿ ನೋಡು' ಎಂದು ಭದ್ರಗಾಯಕನು ತನ್ನ ಸತಿಗೆ ಹೇಳಿದನು. ಆಕೆ ಕೈಹಾಕಿ ನೋಡಲು ವಿಭೂತಿಯು ಮುತ್ತು ರತ್ನ ಹೊನ್ನು ಚಿನ್ನಾಭರಣವಾಗಿದ್ದಿತು. ಜ್ಞಾನೋದಯವಾದ ಸತಿಯು ಪತಿಗೆ ಎರಗಿದಳು. ಸತಿಪತಿಗಳು ಶಿವಭಕ್ತಿಯ ಮಾಡುತ್ತಿರಲು, ಒಂದುದಿನ ಭದ್ರಗಾಯಕನು ಲಿಂಗಕ್ಕೆ ರಾಗವ ಕೇಳಿಸಿ ಲಿಂಗದೊಳಗಾದನು (ಭೈರಕಾಕ ೨ ಪು.೨೭೩–೨೭೪).

ಚೇರಮನು ತನ್ನ ಸತಿಯಿಂದ ರುದ್ರಾಕ್ಷಿಯ ಮಹತ್ವವನ್ನರಿತನೆಂಬುದಕ್ಕೆ ಕಥೆ :

ಕೇರಳದರಸು ಚೇರಮನು ತನ್ನ ಸತಿಯಿಂದ ರುದ್ರಾಕ್ಷಿಯ ಮಹತ್ವವನ್ನರಿತು ಎಂಬತ್ತು ಸಾವಿರ ಕುದುರೆಗಳಿಗೆ ಹಲ್ಲಣ ಹಕ್ಕರಿಕೆ ಮುಖರಂಬ ರಾವುತರ ಮೈಜೋಡು ಮೊದಲಾದುವೆಲ್ಲವೂ ರುದ್ರಾಕ್ಷಿಯಿಂದ ಸಂಜೋಗವ ಮಾಡಿದನು. ತಿರುವಂಜಿಕಳನಾಥಲಿಂಗಕ್ಕೆ ನಿತ್ಯವೂ ಪೂಜೆ ಮಾಡುವಲ್ಲಿ ಮದ್ದಳೆ, ತಾಳ, ಚಂಗು, ಆವುಜ, ಢಕ್ಕೆ, ಪಟಹ, ಭೇರಿ, ನಿಸ್ಸಾಳ, ತುಡುಮು, ರಣಗಾಳೆ, ಹೆಗ್ಗಾಳೆ, ಮೌರಿ, ಶಂಖ, ಚಿನ್ನಗಾಳೆ, ಘಂಟೆ– ಇವೇ ಮೊದಲಾದವುಗಳಿಂದ ನಾದವನ್ನು ಮಾಡಿ ನಿಲಿಸಿ ಗರ್ಭಗೃಹದಲ್ಲಿ ನಿಂದು ಚೇರಮರಾಯನು ಜನರು ಉಸಿರಾಡದಂತೆ ನಿಃಶಬ್ದಗೊಳಿಸಿ ನಾಗವೀಣೆ, ಕಿನ್ನರ ವೀಣೆ, ರುದ್ರವೀಣೆ ಮೊದಲಾದ ಹದಿನೆಂಟು ತೆರದ ವೀಣೆಗಳನ್ನು ಶ್ರುತಿಗೊಳಿಸಿ ಮೂವತ್ತೆರಡು ರಾಗಗಳನ್ನು ಸಪ್ತಸ್ವರದಿಂದ ವೀಣೆಯಲ್ಲಿ ನುಡಿಸಿ ಲಿಂಗವ ಕೇಳಿಸಿ ಮುನ್ನ ನಂಬ್ಯಣ್ಣನು ಶಿವನನ್ನು ನಾಟ್ಯವಾಡಿಸಿದಂತೆ ವೀಣೆಯ ಶೋಭಿತಕ್ಕೆ ಲಿಂಗವು ತನುವಲೆಯಲು ಪೂರ್ಣವೆಂದರಿದು ಪೂಜೆಯ ಮುಗಿಸಿ ಪ್ರಸಾದವ ಸವಿದು ಸುಖದಿಂದಿರುತ್ತಿದ್ದನು (ಭೈರಕಾಕ ೨ ಪು. ೨೭೬–೨೭೭).

ಮೊಸಳೆಯು ನುಂಗಿದ ಶಿಶುವಿಗೆ ಏಳುವರುಷಕ್ಕೆ ನಂಬ್ಯಣ್ಣ ಅಸುವಿತ್ತನೆಂಬುದಕ್ಕೆ ಕಥೆ :

ಈ ಕಥೆಯ ಘಟನೆಯು ನಂಬಿ ಚಾರಮರು ಕುಡುಗಲೂರಿಗೆ ಬರುವಾಗ ನಡೆಯಿತೆಂದು ಶಾಂತಲಿಂಗನು ನಿರೂಪಿಸುವನು (ನೋಡಿ : ಭೈರಕಾಕ ೨

ಪು. ೩೩೯). ಇದು ಪಾಲ್ಕುರಿಕೆ ಸೋಮನಾಥನ 'ಪಂಡಿತಾರಾಧ್ಯ ಚರಿತ್ರ' ಯನ್ನು ಅನುಸರಿಸಿದಂತಿದೆ.

ಕಾರಿಕಾಲಮ್ಮ ತಲೆಯೂರಿ ನಡೆದು ನಂಬಿ–ಚೇರಮರಿಗೆ ಮುನ್ನವೆ ಕೈಲಾಸವನ್ನು ಸೇರಿದಳೆಂಬುದಕ್ಕೆ ಕಥೆ :

ಪರವೆನಾಚಿಯು ಬೈಲಾದಳೆಂಬುದನ್ನು ಕೇಳಿ ಕೈಲಾಸಕ್ಕೆ ನಂಬಿಯು ಹೋಗಲು ಆ ಸುದ್ದಿ ತಿಳಿದ ಚೇರಮನೂ ಕುದುರೆ ಏರಿ ಕೈಲಾಸಕ್ಕೆ ನಡೆದನು. ಚೇರ ಹಾಗೂ ತಿರುನೀಲಕಂಠಪಾಣರು ತಲೆಯಲ್ಲಿ ನಡೆವ ಕಾರಿಕಾಲಮ್ಮೆಯನ್ನು ಕಂಡು 'ತಲೆಯಲ್ಲಿ ನಡೆದು ಎಂದಿಗೆ ಕೈಲಾಸಕ್ಕೆ ಹೋಗುವಿರಮ್ಮ' ಎನ್ನಲು 'ಶಿವನು ನಡೆಸಿದಂತೆ ನಡೆವೆ'ನೆಂದು ಕಾರಿಕಾಲಮ್ಮೆ ಹೇಳಿ ಅವರಿಗಿಂತ ಮುನ್ನವೇ ಕೈಲಾಸಕ್ಕೆ ಹೋಗಿ ಗಿರಿಜೆಯ ಸಮೀಪವಿದ್ದಳು. ಅದನ್ನು ಕಂಡು ಭರದಿಂದ ಬಂದ ಕುದುರೆಗಿಂತ ಶಿರದಲ್ಲಿ ನಡೆದುಬಂದ ಶಿವಭಕ್ತೆಯ ಗಮನ ತೀವ್ರವಾಯಿತಲ್ಲಾ ಎಂದು ನಂಬಿ ಚೇರಮರು ಗಣಗಳ ಮುಂದೆ ಅವಳನ್ನು ಕೊಂಡಾಡಿದರು (ಭೈರಕಾಕ ೨ ಪು. ೩೫೧–೩೫೨).

ಚೇರಮರಾಯನು ಕೈಲಾಸಕ್ಕೆ ದಾಳಿಮಾಡಿದನೆಂಬುದಕ್ಕೆ ಕಥೆ :

ಶಿವನು ನಂಬಿಯಣ್ಣನನ್ನು ಕೈಲಾಸಕ್ಕೆ ಬರುವಂತೆ ಓಲೆಯನ್ನು ಬರೆದು ಅಂದಳ, ಐರಾವತ, ನಂದಿಯ ಟೆಕ್ಕೆಯಗಳನ್ನು ಕಳುಹಿಸಿದನು. ನಂಬಿಯಣ್ಣನು ಚೇರಮನ ಮನೆಗೆ ಬಂದು ದ್ವಾರಪಾಲಕರಿಂದ ಎಣ್ಣೆ ಮಜ್ಜನದಲ್ಲಿರುವುದನ್ನು ತಿಳಿದು ಕೈಲಾಸಕ್ಕೆ ಹೋಗುತ್ತಿದ್ದೇನೆಂದು ಬರಹಮೂಲಕ ಚೇರಮನಿಗೆ ತಿಳಿಸಿ ಹೋದನು. ದ್ವಾರಪಾಲಕನು ವಿಷಯವನ್ನು ಚೇರಮನಿಗೆ ತಿಳಿಸಲು ಅವನು ಎಣ್ಣೆದಲೆ ಸಹಿತ ಬಂದು ಬರಹವನ್ನು ಓದಿ ಜಳಕವನ್ನು ಬಿಟ್ಟು ೮೧,೦೮೦ ಕುದುರೆಗೆ ರುದ್ರಾಕ್ಷಿ ಸಂಜೋಗದಲ್ಲಿ ಏರಿ ಕೈಲಾಸಕ್ಕೆ ದಾಳಿಯಿಟ್ಟನು (ಭೈರಕಾಕ ೨ ಪು. ೪೦೧–೪೦೧).

ಉತ್ತರದೇಶದ ಬಸವಲಿಂಗನು (೧೬೮೦) 'ಬಸವೇಶ್ವರಪುರಾಣದ ಕಥಾಸಾಗರ'ದಲ್ಲಿ ಚೇರಮನ ಬದುಕಿನ ನಾಲ್ಕು ಘಟನೆಗಳನ್ನು ಪ್ರಸ್ತಾಪಿಸಿರುವನು. ಅವು ಹೀಗಿವೆ :

1. ಚೇರಮನು ಅಚ್ಚುಡಿಪುರದ ಅಗಸನ ಮೈಮೇಲೆ ಸುಣ್ಣ ಸಿಡಿದು ಬೆಳ್ಳಗಾಗಿರಲು ಕಂಡು ಭಸ್ಮವ ಧರಿಸಿದ ಮಹೇಶ್ವರನೆಂದು ಆನೆಯಿಂದಿಳಿದು ಒಂದು ನಮಸ್ಕಾರ ಮಾಡಿದುದು (ಪು. ೬೮–೬೯)

2. ಮಧುರಾಪಟ್ಟಣವನಾಳುವ ಸೌಂದರಪಾಂಡ್ಯ, ಕಂಚಿಯನಾಳುವ ರಾಜೇಂದ್ರ ಚೋಳ, ಮಹೋದಧಿಯನಾಳುವ ಚೇರಮರಾಯ ಇವರು ಮೂವರೂ ಇಂದ್ರನ ಸೊಕ್ಕನ್ನು ಮುರಿದುದು (ಪು. ೮೩)

3. ಶಿವನು ತನ್ನ ಪಾದದ ಅಂದುಗೆಯ ಧ್ವನಿಯನ್ನು ನಿತ್ಯವೂ ಕೇಳಿಸುವುದಾಗಿ ಚೇರಮನಿಗೆ ಮಾತುಕೊಟ್ಟುದು (ಪು. ೯೩-೯೪)

4. ಚೇರಮರಾಯನಿಗೆ ಅವನ ಸತಿ ರುದ್ರಾಕ್ಷಿಯ ಮಹಿಮೆಯನ್ನು ತಿಳಿಸಿದುದು (ಪು. ೧೨೪).

ಮೇಲಣ ಈ ನಾಲ್ಕೂ ಘಟನೆಗಳು ಶಾಂತಲಿಂಗದೇಶಿಕನಲ್ಲಿ ಬಂದಿವೆ. ಉತ್ತರದೇಶದ ಬಸವಲಿಂಗನು ಶಾಂತಲಿಂಗದೇಶಿಕನ ವಿಶೇಷ ಪ್ರಭಾವಕ್ಕೆ ಒಳಗಾಗಿರುವುದು ಅವನನ್ನು ಕಥಾನಿರೂಪಣೆಯಲ್ಲಿ ಅನುಸರಿಸುವುದರಿಂದ ಸ್ಪಷ್ಟವಾಗುತ್ತದೆ. ಕೆಲವೆಡೆ ಉತ್ತರದೇಶದ ಬಸವಲಿಂಗನು ಶಾಂತಲಿಂಗದೇಶಿಕನು ಹೇಳದೆ ಬಿಟ್ಟಿರುವ ಸಂಗತಿಗಳನ್ನು (ಕಥೆಗಳಲ್ಲಿ) ಹೇಳಿರುವುದುಂಟು. ಉದಾಹರಣೆಗೆ, ಚೇರಮನು ತನ್ನ ಸತಿಯಿಂದ ರುದ್ರಾಕ್ಷಿಯ ಮಹತ್ವವನ್ನರಿತುದನ್ನು ಶಾಂತಲಿಂಗದೇಶಿಕನು ಹೇಳುವನು. ಆದರೆ, ಅವನು ಅದರ ವಿವರಗಳನ್ನು ಪ್ರಸ್ತಾಪಿಸಿಲ್ಲ (ನೋಡಿ : ಭೈರಕಾಕ ೨ ಪು. ೨೭೬–೨೭೭). ಉತ್ತರ ದೇಶದ ಬಸವಲಿಂಗನು ಆ ವಿವರಗಳನ್ನು ಹೀಗೆ ನೀಡಿರುವನು :

ಚೇರಮರಾಯನು ಏಕಾಂತದಲ್ಲಿರುವಾಗ ತಮ್ಮ ಸತಿಯ ತೋಳ ಮುಟ್ಟಿ ನೋಡಲು, ಅದು ಗಂಟಾಗಿರಲು, ಇದೇನೆಂದು ಕೇಳಲು, ಇದು ರುದ್ರಾಕ್ಷೆ ಎನಲು, ಇದ ನಿನಗೆ ಧರಿಸಹೇಳಿದವರಾರೆನಲು, ಶಿವಪುರಾಣವ ಹೇಳುವಾಗ ಅಲ್ಲಿ ಒಂದು ಕಥೆಯ ಕೇಳಿದೆನೆನಲು, ಅದ ನನಗೆ ಹೇಳೆನಲು ಇಂತೆಂದಳು : ಗೌಡದೇಶದಲ್ಲಿ ಮಾಣಿಕಸೆಟ್ಟಿ ಎಂಬುವನು ಕತ್ತೆಗಳ ಮೇಲೆ ರುದ್ರಾಕ್ಷೆಯ ಹೇಱಿಕೊಂಡು ಹೋಗುವಾಗ್ಗೆ ಅದರೊಳೊಂದು ಕತ್ತೆ ಸಾಯಲು, ಯಮದೂತ

ರೊಯ್ದು ವಿಚಾರಿಸಲು, ಚಿತ್ರಗುಪ್ತರು ಇದಕ್ಕೆ ರುದ್ರಾಕ್ಷಿಯು ಸೋಂಕಿದ ಫಲವದೆ ಎನಲು, ಅದ ಕೇಳಿ ಯಮ ಬಿಡಲು. ಆ ಕತ್ತೆ ರಾಜಕುಮಾರಿಯಾಗಿ ಹುಟ್ಟಿತೆಂದು ಕೇಳಿ ರುದ್ರಾಕ್ಷಿಯ ಧರಿಸಿದೆನೆನಲು, ಆಗ ಚೇರಮರಾಯ ಸತಿಯ ತೋಳೊಳಗಿದ್ದ ರುದ್ರಾಕ್ಷಿಯ ಚೂರಿಯಲ್ಲಿ ಜಮದಂಡೆಯಿಂದ ಮಿಾಟಲು, ಅವು ಮುಚಿಯಲು, ಬಳಿಕ ತಾನೇ ತೆಗೆದು ತೋಱಲು, ಆಗ ಎಂಬತ್ತು ಸಾವಿರ ಕುದುರೆಗೆ ಹಕ್ಕರಿಕೆಗಳು, ರಾವುತರಿಗೆ ಮೈಜೋಡು ಕಿರೀಟ ಮೊದಲಾದುವನ್ನು ರುದ್ರಾಕ್ಷಿಯಲ್ಲಿ ಮಾಡಿ ಅದರ ಮಹಿಮೆಯಿಂದ ಕೈಲಾಸಕ್ಕೆ ಹೋದನು (ಪು. ೧೨೪).

ಹರಿಹರೇತರಕೃತ ವಿರೂಪಾಕ್ಷಾಂಕಿತವುಳ್ಳ ನಲವತ್ತೆರಡು ಕಥಾನಾತ್ಮಕ ರಗಳೆಗಳು ದೊರೆತಿದ್ದು[18], ತಮಿಳುನಾಡಿನ ಅರುವತ್ತು ಮೂವರು ಪುರಾತನರಲ್ಲಿ ಮೂವತ್ತೇಳು ಮಂದಿ ಶಿವಭಕ್ತರ ಕಥೆಗಳು ಇದರಲ್ಲಿ ಬಂದಿವೆ. ಈ ಮೂವತ್ತೇಳು ಮಂದಿ ಶಿವಭಕ್ತರ ಕಥೆಗಳಲ್ಲಿ ಚೇರಮನದೂ ಒಂದು. ಹರಿಹರ ಚೇರಮನನ್ನು ಕುರಿತು ಪ್ರತ್ಯೇಕ ರಗಳೆಯನ್ನು ಬರೆದಿಲ್ಲ. ಪ್ರಸ್ತುತ 'ಚೇರಮ ನಾಯನಾರ್ ರಗಳೆ'ಯು ಹರಿಹರ ವಿರಚಿತವಲ್ಲವೆಂಬುದು ನಿಸ್ಸಂದೇಹ,

---

18. ಇವನ್ನು 'ಶಿವಶರಣ ಸಂಪುಟ' ಎಂಬ ಹೆಸರಿನಲ್ಲಿ ಎಚ್. ದೇವೀರಪ್ಪನವರು ಸಂಪಾದಿಸಿಕೊಟ್ಟಿರುವರು. ಈ ಎಲ್ಲ ರಗಳೆಗಳ ಕರ್ತೃ ಯಾರೆಂಬುದು ತಿಳಿಯದು. ಈ ರಗಳೆಗಳು ವಿರೂಪಾಕ್ಷ ಮುದ್ರೆಯನ್ನು ಹೊತ್ತಿವೆ. ವಿರೂಪಾಕ್ಷಾಂಕಿತವಿರುವ ರಗಳೆಗಳೆಲ್ಲವೂ ಹರಿಹರನವೇ ಎಂಬ ಸಾಂಪ್ರದಾಯಿಕ ನಂಬುಗೆ ವಿದ್ವಾಂಸರಲ್ಲಿ ಬೇರೂರಿದೆ. ಎಚ್. ದೇವೀರಪ್ಪನವರು ಇವು ಹರಿಹರನ ರಗಳೆಗಳಲ್ಲವೆಂಬುದನ್ನು ಸಾಧಾರಪೂರ್ವಕವಾಗಿ 'ಶಿವಶರಣ ಸಂಪುಟ'ದ ಪೀಠಿಕೆಯಲ್ಲಿ ತೋರಿಸಿಕೊಟ್ಟಿರುವರು. ಅವರು "ಹರಿಹರೇತರಕೃತ ವಿರೂಪಾಕ್ಷಾಂಕಿತ ರಗಳೆಗಳು ಒಬ್ಬ ಕವಿಮಾಡಿದುವಲ್ಲ ; ಬೇರೆ ಬೇರೆ ಕವಿಗಳು ಬೇರೆ ಬೇರೆ ಕಾಲದಲ್ಲಿ ಬರೆದಂತಹವು...." ಎಂದು ಹೇಳಿ, ಈ ಸಂಪುಟದಲ್ಲಿನ ಎಲ್ಲ ರಗಳೆಗಳು ಕ್ರಿ. ಶ. ೧೭೪೫ರ ಹೊತ್ತಿಗೆ ರಚಿಸಲ್ಪಟ್ಟಿದ್ದುವೆಂದು ಅಭಿಪ್ರಾಯಪಡುವರು.

ನಿರ್ವಿವಾದ ಎಂದು ಎಚ್. ದೇವೀರಪ್ಪನವರು ಅಭಿಪ್ರಾಯಪಟ್ಟಿರುವರು (ಪೀಠಿಕೆ, ಪು. ೫೧). ಈ ರಗಳೆ ಸಂಸ್ಕೃತದ ಉಪಮನ್ಯುಪ್ರೋಕ್ತ 'ಭಕ್ತ ವಿಲಾಸ'ದಲ್ಲಿ ಬರುವ ಚೇರಮನ ವೃತ್ತಾಂತವನ್ನು ಕನ್ನಡಕ್ಕೆ ಭಾಷಾಂತರಿಸಿದ ಎಂದು ಎಚ್. ದೇವೀರಪ್ಪನವರು ಹೇಳಿರುವರು (ಪೀಠಿಕೆ, ಪು. ೫೨). ಸಂಸ್ಕೃತದ ಉಪಮನ್ಯುಪ್ರೋಕ್ತ 'ಭಕ್ತವಿಲಾಸ'ಕ್ಕೆ ಮೂಲ ಶೇಕ್ಕಿಳಾರನ 'ಪೆರಿಯ ಪುರಾಣಂ' ಎಂದು ವಿದ್ವಾಂಸರು ಅಭಿಪ್ರಾಯಪಡುವರು.

ಈ ರಗಳೆಯಲ್ಲಿ ಚೇರಮನ ಕಥೆ 'ಪೆರಿಯಪುರಾಣಂ'ನಲ್ಲಿ ಬರುವಂತೆಯೇ ಬಂದಿದ್ದು ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಮಾತ್ರ ಹೊಂದಿದೆ. ಉದಾಹರಣೆಗೆ ಪೆರಿಯಪುರಾಣಂನಲ್ಲಿ ಗೋದರಾಯನು ವ್ಯಾಧಿಗ್ರಸ್ತನಾಗಿದ್ದುದರಿಂದ ವೈರಾಗ್ಯ ತಾಳಿ ತಿರುವಂಜಕಳನಾಥನ ಸೇವೆಯಲ್ಲಿದ್ದನೆಂದು ಹೇಳಿದೆ. ರಗಳೆಯಲ್ಲಿ ಈ ಪ್ರಸ್ತಾಪವಿಲ್ಲ. ಚೇರಮನು ನಂಬಿಯಣ್ಣನನ್ನು ನೋಡಲು ತಿರುವಾರೂರಿಗೆ ಬಂದಾಗ ಈ ಉಭಯಮಿತ್ರರನ್ನು ಪರವೆ ಇದಿರುಗೊಂಡು ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ ತಾನೇ ಕಯ್ಯಾರೆ ಮಾಡಿದ್ದ ಗಮಗಮಿಸುವ ಭಕ್ಷ್ಯಭೋಜ್ಯ ಚೋಷ್ಯ ವ್ಯಂಜನಾದಿಗಳನ್ನು ಒಂದೇ ಎಡೆಯಲ್ಲಿ ಬಡಿಸಿದಳು ಎಂದು ರಗಳೆಯಲ್ಲಿ ಹೇಳಿದೆ. ಪೆರಿಯಪುರಾಣಂನಲ್ಲಿ ಇದರ ಪ್ರಸ್ತಾಪವಿಲ್ಲ. ಮಧುರೆಯ ಸೀಮೆಯಲ್ಲಿದ್ದ ಪ್ರಸಿದ್ಧ ದೇವಾಲಯಗಳನ್ನು ಚೇರಮ ನಂಬಿಯರು ಸಂದರ್ಶಿಸಿ ಅನಂತರ ತಿರುವತ್ತಿಯೂರಿಗೆ ಬರುವರು. ಅಲ್ಲಿದ್ದ ನಂಬಿಯಣ್ಣನ ಮತ್ತೋರ್ವ ಪ್ರೇಯಸಿಯಾದ ಸಂಕಿಲಿಯು (ಇವಳ ಇನ್ನೊಂದು ಹೆಸರು ಸಾಗರಿಕೆ) ಇವರಿಬ್ಬರನ್ನೂ ಅತ್ಯಾದರದಿಂದ ಸ್ವಾಗತಿಸಿ ಬಗೆಬಗೆಯಾಗಿ ಉಪಚರಿಸುವಳು. ಮಿತ್ರರು ಅಲ್ಲಿ ಕೆಲದಿವಸ ತಂಗುವರು. ಚೇರಮನು ನಂಬಿಯಣ್ಣನನ್ನು ತನ್ನ ಪಟ್ಟಣಕ್ಕೆ ಕರೆದುಕೊಂಡು ಹೊರಟಾಗ ಸಾಗರಿಕೆ ವಿರಹದ ಭೀತಿಯಿಂದ ಚಿಂತೆಗೊಂಡಿರಲು ಅವಳನ್ನು ವಿವಿಧೋಪಚಾರಗಳಿಂದ ಉಪಚರಿಸಿ ಅವಳ ವಿಯೋಗ ಭೀತಿಯನ್ನು ಬಿಡಿಸಿ ನಂಬಿಯಣ್ಣನು ಚೇರಮನೊಡನೆ ಮುಂದೆ ಸಾಗುವನೆಂದು ರಗಳೆಯಲ್ಲಿ ಹೇಳಿದೆ. ಪೆರಿಯಪುರಾಣಂನಲ್ಲಿ ಇದರ ಪ್ರಸ್ತಾಪವಿಲ್ಲ. ನಂಬಿ ಚೇರಮರು ತುಂಬಿ ಹರಿಯುತ್ತಿದ್ದ ಕಾವೇರಿಯನ್ನು ದಾಟಲು ಬಂದಾಗ ನಂಬಿಯು ತಿರುಪಾಟೊಂದನ್ನು ಹಾಡಿ ಹರಿಯುತ್ತಿದ್ದ ಕಾವೇರಿ ಕ್ಷಣಕಾಲ ಹರಿವುದನ್ನು ನಿಲ್ಲಿಸಿ

ದಾರಿಬಿಟ್ಟುಕೊಡುವಂತೆ ಮಾಡಿದನೆಂದು ಪೆರಿಯಪುರಾಣಂನಲ್ಲಿ ಬಂದಿದೆ. ರಗಳೆಯಲ್ಲಿ ಈ ಘಟನೆ ಇನ್ನಷ್ಟು ರಂಜನೀಯವಾಗಿ ಬಂದಿದೆ. ತುಂಬಿದ ಪ್ರವಾಹದಲ್ಲಿ ಕಾವೇರಿ ಹರಿಯುತ್ತಿರುವುದನ್ನು ಕಂಡ ನಂಬಿಯು ಅಲ್ಲಿ ಶಿವ ತನ್ನ ನಿಜ ರೂಪುದೋರುವಂತೆ ತಿರುಪಾಡನ್ನು ಹಾಡುವನು. ಸದಾಶಿವನು ನದೀಮಧ್ಯದಲ್ಲಿದ್ದು ಆತನ ತಿರುಪಾಡುಗಳನ್ನು ಕೇಳಿ 'ಎಳೆಗಱುವಿನ ನುಣ್ದನಿಯಂ ಕೇಳ್ದು ಮಾತೆಯಪ್ಪ ಧೇನು ಮೆಲ್ಲನೆ ದನಿಗೊಡುವಂತಾಂ ಬರ್ಪೆನೆಲೆ ಕಂದಾ' ಎಂದು ಈಶ್ವರನು ಗಟ್ಟಿಯಾಗಿ ನುಡಿಯುವನು. ಅದನ್ನು ಹದಿನಾಲ್ಕು ಲೋಕಗಳೂ ಕೇಳಿ ಅಚ್ಚರಿಗೊಂಡಿರಲು ಆ ಸಮಯದಲ್ಲಿ ಕವೇರಕನ್ನೆ 'ಜಲಂಗಳಂ ತೊಲಗನೂಕಿ ನದೀಮಧ್ಯದೊಳ್ ಸ್ಫಾಟಿಕ ಗಿರೀಂದ್ರಸದೃಶಮಾಗಿ ಮೆಱೆವ ಮಣಲ ದೀಣಮಂ ಕಂಡು' ಆಶ್ಚರ್ಯದಿಂದ ಹರ್ಷಪುಳಕವನ್ನು ಹೊಂದಿ ಶಿವ ಕಾರುಣ್ಯವನ್ನು ನೆನೆದು ಕೈಮುಗಿದು ಅಡ್ಡಬೀಳುವಳು. ಆ ದೃಶ್ಯವನ್ನು ನೋಡಿ ಭಕ್ತಿಕಂಪಿತನಾದ ಚೇರಮನು ನಂಬಿಯಣ್ಣನಿಗೆ ಅಡ್ಡಬೀಳುವನು. ಆಗ ನಂಬಿಯಣ್ಣನೂ ಚೇರಮನಿಗೆ ಪೊಡಮಡುವನು. ಈ ದೃಶ್ಯ ಪೆರಿಯ ಪುರಾಣಂನಲ್ಲಿ ಬರುವುದಿಲ್ಲ. ನಂಬಿ ಚೇರಮರು ಕೈಲಾಸಕ್ಕೆ ಬಂದಾಗ ಶಿವನ ಆಸ್ಥಾನದ ದ್ವಾರಪಾಲಕರು ಉಪದೇಶವಿಲ್ಲದವರು ಒಳಗೆ ಪ್ರವೇಶಿಸಲಾಗದೆಂದು ಚೇರಮನನ್ನು ತಡೆಯುವರು. ನಂಬಿ ಶಿವನಿಗೆ ಅದನ್ನು ತಿಳಿಸಲು, ಭರ್ಗನು ನಂದಿಕೇಶನನ್ನು ಕರೆದು ಘನದೀಕ್ಷೆಯನ್ನು ಚೇರಮನಿಗೆ ಕೊಡುವಂತೆ ಆಜ್ಞೆಮಾಡುವನು ಎಂದು ರಗಳೆಯಲ್ಲಿ ಹೇಳಿದ್ದರೆ, ಪೆರಿಯಪುರಾಣಂನಲ್ಲಿ ದೀಕ್ಷೆಯ ಪ್ರಸ್ತಾಪವೇ ಬರುವುದಿಲ್ಲ.

ಹೀಗೆ ಐದು ಸ್ಥಲಗಳಲ್ಲಿ ಬರುವ 'ಚೇರಮನಾಯನಾರ್ ರಗಳೆ'ಯು ಪೆರಿಯಪುರಾಣಂನಲ್ಲಿ ಬರುವ ಚೇರಮನ ಕಥೆಯನ್ನೇ ಅನುಸರಿಸಿದ್ದು ಅಲ್ಪ ಸ್ವಲ್ಪ ಬದಲಾವಣೆಗಳನ್ನು ಮಾತ್ರ ಒಳಗೊಂಡಿದೆ.

ವೀರಭದ್ರಕವಿಯ (೧೯೦೦) 'ಅರುವತ್ತುಮೂವರು ಪುರಾತನರ ಪುರಾಣ'ವು ತಮಿಳುನಾಡಿನ ಅರುವತ್ತುಮೂವರು ಶೈವಸಂತರ ಬದುಕನ್ನು ಸಮಗ್ರವಾಗಿ ಷಟ್ಪದಿ ಕಾವ್ಯರೂಪದಲ್ಲಿ ಹೇಳಹೊರಟ ಕೃತಿ. ಇದರ ಬಹುಭಾಗ ನಂಬಿಯಣ್ಣನ ಕಥೆಗೇ ಮೀಸಲಾಗಿದ್ದು ಅಲ್ಲಿ ಚೇರಮನ ಕಥೆ ಬಹಳ

ಸಂಕ್ಷಿಪ್ತವಾಗಿ ಬರುತ್ತದೆ. ಚೇರಮನ ಪ್ರಸ್ತಾಪ ಮೊದಲಿಗೆ ಕೃತಿಯ ಎರಡನೆಯ ಸಂಧಿಯಲ್ಲಿ ಬರುತ್ತದೆ. ಅಲ್ಲಿ ಪರವೆಯೊಡನೆ ನಂಬಿಯಣ್ಣ ಸುಖದಿಂದಿರಲು ಚೇರಮನು ತಿರುವಾರೂರಿಗೆ ಬರುವನು. 'ಚೇರಮ ಬರಲಾತನೊಡನೆ ಹಿತ ದಿಂದಿರುತೆ' ಎಂದು ಕವಿ ಹೇಳಿ ವಿವರಗಳೇನನ್ನೂ ನೀಡುವುದಿಲ್ಲ. ತಿರುನೀಲ ಕಂತನು ಚೇರಮನಲ್ಲಿಗೆ ಬಂದು ಸಂಗೀತ ಹಾಡಿ ಅವನನ್ನು ಮೆಚ್ಚಿಸಿದ ಪ್ರಸ್ತಾಪ ಒಂದು ಪದ್ಯದಲ್ಲಿ(ಸಂ. ೨೦. ಪ. ೪೫) ಬರುತ್ತದೆ. ಇದರ ವಿವರ ಕೃತಿಯ ಆರಂಭದಲ್ಲೇ (೨. ೫೦) ಬಂದಿದೆ. ನಂಬಿಯಣ್ಣನು ಕೈಲಾಸಕ್ಕೆ ಹೊರಟ ಸುದ್ದಿ ತಿಳಿದ ಚಾರಮರಾಯನು ಅವನನ್ನು ಕೂಡಿಕೊಳ್ಳಲು ಕುದುರೆ ಏರಿ ಹೋಗುವನು. ಮಾರ್ಗದಲ್ಲಿ ನಂಬಿಯನ್ನು ಕೂಡಿಕೊಂಡ ಚೇರಮನು ನಂಬಿ ಯೊಡನೆ ಕೈಲಾಸದ ಶಿವನ ಸಭೆಯನ್ನು ಪ್ರವೇಶಿಸುವನು. ಶಿವನು ಅವರಿಬ್ಬರಿಗೂ ಗಣಪದವಿಯನ್ನು ಅನುಗ್ರಹಿಸುವನು (ಸಂ. ೨೧ ಪ. ೭). ನಂಬಿ ಚೇರಮರು ಕೈಲಾಸ ಮಾರ್ಗದಲ್ಲಿ ಕಾರಿಕಾಲಮ್ಮೆಯನ್ನು ಭೇಟಿಮಾಡುವ ಪ್ರಸಂಗ ಈ ಕೃತಿಯಲ್ಲಿ ಬರುವುದಿಲ್ಲ.

## ಚೇರಮನ ಕಥೆಯ ಸಿಂಹಾವಲೋಕನ

ಚೇರಮನು ಚೇರ ಅರಸು. ಶೇಕ್ಕಿಳಾರನು ಇವನನ್ನು ಮಲೈನಾಟ್ಟು ಅಥವಾ ಚೇರರಾಜ್ಯದ ಅರಸನೆಂದೂ, ಇವನ ರಾಜಧಾನಿ ಕೊಡುಂಕೋಳೂರು ಹಾಗೂ ತಿರುವಂಜಕ್ಕಳಂ ಎಂದೂ ಹೇಳುವನು. ಉಪಮನ್ಯು ಭಕ್ತವಿಲಾಸ ದಲ್ಲಿ ಹಾಗೂ ಶಿವರಹಸ್ಯದಲ್ಲಿ ಇವನನ್ನು ಮಹಾಗೋದನೆಂದೂ ಇವನ ಪಟ್ಟಣ ಮಹೋದಯವೆಂದೂ ಹೇಳಲಾಗಿದೆ. ಹರಿಹರನ ಪ್ರಕಾರ ಚೇರಮನು ತಿರುಪಾಂಡ್ಯಕೊಡುಮುಡಿ ಎಂಬ ಪಟ್ಟಣದ ಅರಸು. ಲಕ್ಕಣ್ಣದಂಡೇಶನು ಚೇರಮನು ಮಲೆಯಾಳದೇಶದ ಕುಡುಗಲೂರಲ್ಲಿ ರಾಜ್ಯಭಾರಮಾಡುತ್ತಿದ್ದ ನೆನ್ನುವನು. ಸುರಂಗನು ಚೇರಮ ಚೇರಮಂಡಲದ ಕುಡುಂಗನೂರನ್ನು ಆಳುತ್ತಿದ್ದನೆನ್ನುವನು. ವಿರುಪರಾಜನು ಚೇರಮನನ್ನು ಕೇರಳದೇಶದ ಮಹೋದಯ ಪಟ್ಟಣದರಸು ಎಂದಿರುವನು. ಚೇರಮಾಂಕನು ಚೇರಮನನ್ನು ಕೇರಳಾಧಿಪತಿಯೆಂದೂ; ಕೇರಳದೇಶಕ್ಕೆ ಶಿರೋರತ್ನಪ್ರಾಯವಾದ ಕುಡುಗ ಲೂರು ಚೇರಮನ ಹಿರಿಯ ರಾಜಧಾನಿಯೆಂದೂ, ತಿರುವಂಜಕಳಪುರ ಹಾಗೂ

ಮಹೋದಯ ಪಟ್ಟಣಗಳು ಅವನ ಉಪರಾಜಧಾನಿಗಳೆಂದೂ ಹೇಳುವನು. ಶಂಕರದೇವನು ಮಲೆಯದೇಶದ ಮಧ್ಯಭೂಮಿಯಲ್ಲಿ ಕುಡುಗಲೂರೆಂಬ ಪಟ್ಟಣವಿದ್ದು ಇದನ್ನು ಚೇರಮನು ಆಳುವನೆಂದು ಹೇಳುವನು. ಶಾಂತಲಿಂಗದೇಶಿಕ ಹಾಗೂ ಉತ್ತರದೇಶದ ಬಸವಲಿಂಗರು ಕೇರಳರಾಜ್ಯದ ಕುಡುಗಲೂರೆಂಬ ಪಟ್ಟಣದಲ್ಲಿ ಚೇರಮರಾಯನಿದ್ದನೆಂದು ಹೇಳುವರು.

ಚೇರಮನು ಸಿಂಹಾಸನವೇರಿದ ಪ್ರಸಂಗವು ಕೃತಿಗಳಲ್ಲಿ ಭಿನ್ನ ಭಿನ್ನ ರೂಪಗಳನ್ನು ಹೊಂದಿದೆ. ಪೆರಿಯಪುರಾಣಂನಲ್ಲಿ ಪೊರ್ರೈಯಾನ್‌ನು ವ್ಯಾಧಿಗ್ರಸ್ತನಾಗಿದ್ದುದರಿಂದ ವೈರಾಗ್ಯತಾಳಿ ತಪಸ್ಸು ಮಾಡಲೆಂದು ರಾಜ್ಯತ್ಯಾಗ ಮಾಡಿದನು. ರಾಜನಿಲ್ಲದೆ ರಾಜ್ಯವು ಅನಾಥವಾಗಬಾರದೆಂದು ತಿರುವಂಜಿಕ್ಕಳಂನಲ್ಲಿ ಸೇವೆ ಸಲ್ಲಿಸುತ್ತಿದ್ದ ಚೇರಮಾನ್‌ನನ್ನು ಮಂತ್ರಿಗಳು ಕಂಡು ತಮ್ಮ ರಾಜನಾಗಬೇಕೆಂದು ಪ್ರಾರ್ಥಿಸುವರು. ಚೇರಮಾನ್‌ನು ಶಿವನ ಅಭಿಮತದಂತೆ ಸಿಂಹಾಸನವನ್ನು ಸ್ವೀಕರಿಸಲು ಒಪ್ಪುವನು. ಉಪಮನ್ಯು 'ಭಕ್ತವಿಲಾಸ'ದಲ್ಲಿ ಶೇಕ್ಕಿಳಾರ್ ಹೇಳುವ 'ಪೊರ್ರೈಯಾನ್' ಕ್ಷಮಾಶೀಲನಾಗಿರುವನು (ಪೊಱೈ = ಕ್ಷಮಾ). ಕ್ಷಮಾಶೀಲನು ಮಹೋದಯಪುರವನ್ನಾಳುತ್ತಿದ್ದು ಆವನಿಗೆ ವೈರಾಗ್ಯ ತಲೆದೋರಿದುದರಿಂದ ಸಾಮ್ರಾಜ್ಯವನ್ನು ತೊರೆದು ತಪಸ್ಸನ್ನಾಚರಿಸಲು ಕಾಡಿಗೆ ತೆರಳುವನು. ಅದೇ ವಂಶದ ಗೋದನೆಂಬ ರಾಜಕುಮಾರನೂ ರಾಜಗದ್ದುಗೆಯನ್ನೊಲ್ಲದೆ ತಿರುವಂಜಕಳನಾಥನ ಸೇವೆಯಲ್ಲಿ ನಿರತನಾಗಿದ್ದನು. ಮಂತ್ರಿಗಳು ರಾಜ್ಯವು ರಾಜನಿಲ್ಲದೆ ಅನಾಥವಾಗಬಾರದೆಂದು ಗೋದನಲ್ಲಿಗೆ ಬಂದು ರಾಜನಾಗುವಂತೆ ಪ್ರಾರ್ಥಿಸುವರು. ತಿರುವಂಜಕಳನಾಥನ ಇಷ್ಟವೇ ತನ್ನಿಷ್ಟವೆಂದು ಭಾವಿಸಿ ಶಿವನಲ್ಲಿ ಗೋದನು ಬಿನ್ನವಿಸುವನು. ಶಿವನು ಗೋದನಿಗೆ ಪ್ರಜೆಗಳ ಕೋರಿಕೆಗೆ ಒಪ್ಪುವಂತೆ ಹೇಳುವನು. ವಿರೂಪಾಕ್ಷಾಂಕಿತ 'ಚೇರಮನಾಯನಾರ್ ರಗಳೆ'ಯು ಉಪಮನ್ಯು 'ಭಕ್ತವಿಲಾಸ'ವನ್ನು ಸಂಪೂರ್ಣವಾಗಿ ಇಲ್ಲಿ ಅನುಸರಿಸಿದೆ. ಶಿವರಹಸ್ಯದಲ್ಲಿ ಪೊರ್ರೈಯಾನ್ ಅಥವಾ ಕ್ಷಮಾಶೀಲನ ಪ್ರಸ್ತಾಪವೇ ಬರುವುದಿಲ್ಲ. ಮಹೋದಯ ಪಟ್ಟಣದ ಮಹಾಗೋದನು ವೈರಾಗ್ಯಗೊಂಡು ತಪಸ್ಸುಮಾಡಲು ಅರಣ್ಯಕ್ಕೆ ತೆರಳುವನು. ಮಂತ್ರಿಗಳು ಅವನಲ್ಲಿಗೆ ಬಂದು ಸಿಂಹಾಸನವನ್ನು ಏರುವಂತೆ ಪ್ರಾರ್ಥಿಸುವರು. ಶಿವನ ಅಭಿಮತ ಕೇಳಿದ

ಮಹಾಗೋದನು ಅವನ ಆದೇಶದಂತೆ ರಾಜ್ಯಭಾರವನ್ನು ಮಾಡಲು ಮಹೋದಯ ಪಟ್ಟಣಕ್ಕೆ ಬರುವನು. ಚೇರಮನಿಗೆ ವೈರಾಗ್ಯ ತಲೆದೋರಿ ಸಕಲವನ್ನೂ ತ್ಯಜಿಸಿ ತಿರುವಂಜಕಳನಾಥನ ಸೇವೆಸಲ್ಲಿಸುತ್ತಿರಲು, ಆ ಸುದ್ದಿ ತಿಳಿದ ಚೋಳ, ಪಾಂಡ್ಯರು ಚೇರಮನಲ್ಲಿಗೆ ಬಂದು ಮತ್ತೆ ರಾಜ್ಯಭಾರವನ್ನು ವಹಿಸಿಕೊಳ್ಳುವಂತೆ ಬಗೆಬಗೆಯಾಗಿ ಪ್ರಾರ್ಥಿಸುವರು. ಅವರ ಪ್ರಾರ್ಥನೆಗೆ ಚೇರಮ ಒಪ್ಪದಿರಲು ತಿರುವಂಜಕಳನಾಥನೇ ಚೇರಮನಿಗೆ ರಾಜ್ಯವಾಳಲು ಆದೇಶ ನೀಡಿ ನಿತ್ಯವೂ ಪೂಜೆಯ ಕೊನೆಯಲ್ಲಿ ಚೇರಮನಿಗೆ ತನ್ನ ಪಾದದಂದುಗೆಯ ನಾದವನ್ನು ಕೇಳಿಸುವುದಾಗಿ ಅವನನ್ನು ಸಮಾಧಾನಿಸುವನು.

ಚೇರಮಾಂಕನು ಕೇರಳದೇಶದ ಅಧಿಪತಿ. ಅಮರನಾಥ ಹಾಗೂ ಅವನ ಪತ್ನಿ ಗುಣವತಿ ತಮಗೆ ಮಕ್ಕಳಿಲ್ಲದ್ದರಿಂದ ಸಂತಾನಭಾಗ್ಯ ಕರುಣಿಸುವಂತೆ ತಿರುವಂಜಕಳನಾಥನನ್ನು ಪ್ರಾರ್ಥಿಸಿದರೆಂದೂ ಅವರ ಭಕ್ತಿಗೆ ಮೆಚ್ಚಿದ ತಿರುವಂಜಕಳನಾಥನು ಗುಣವತಿಗೆ ಪ್ರಸಾದವನ್ನು ಅನುಗ್ರಹಿಸಿದನೆಂದೂ ಪರಮಾತ್ಮನ ಕೃಪೆಯಿಂದ ಜನಿಸಿದ ಮಗುವಿಗೆ ರಾಜದಂಪತಿಗಳು ಗೋಧರನೆಂಬ ಹೆಸರಿಟ್ಟರೆಂದೂ ಬೆಳೆದು ದೊಡ್ಡವನಾದ ಮೇಲೆ ಗೋಧರನು ಸಕಲ ಮಾಹೇಶ್ವರರ ಸೇವೆಗೆ ತನ್ನ ಭಂಡಾರವೆಲ್ಲವನ್ನೂ ಬರಿದು ಮಾಡಲು ತಿರುವಂಜಕಳನಾಥನು ತಿರುವಂಜಕಳದಲ್ಲಿ ಹೊನ್ನಿನ ೮ನ್ನದ ಮಳೆಯನ್ನು ಕರೆದನೆಂದೂ ಹೇಳುವನು. (ಚೇರಮಾಂಕನು ತನ್ನ ಕಥಾನಾಯಕ ಚೇರಮನು ಶಿವನ ಆಜ್ಞೆಯಂತೆ ಭಸಿತ ಮಹಿಮೆಯನ್ನು ಭೂಮಂಡಲದಲ್ಲಿ ಹರಡಲು ಅವತಾರವೆತ್ತಿದ 'ಕಾರಣ ಪುರುಷ'ನೆಂದು ಸಾಂಪ್ರದಾಯಿಕವಾಗಿ ಕೃತಿಯ ಪ್ರಾರಂಭದಲ್ಲಿ ಹೇಳುವನು.)

ಮಧುರೆಯೊಡೆಯ ಶ್ರೀವಾಲಮುಖನು ತನ್ನ ಭಕ್ತನಾದ ಗಾಯಕನೊಬ್ಬನಿಗೆ ಓಲೆಯೊಂದನ್ನು ಬರೆದುಕೊಟ್ಟು ಚೇರಮನನ್ನು ಕಾಣುವಂತೆ ಹೇಳುವ ಪ್ರಸಂಗವು ಕವಿಗಳ ನಿರೂಪಣೆಯಲ್ಲಿ ವ್ಯತ್ಯಾಸಗಳನ್ನು ಪಡೆದುಕೊಂಡಿದೆ. ಶೇಕ್ಕಿಳಾರನು ಆ ಸಂಗೀತಗಾರನ ಹೆಸರನ್ನು ಪಾಣಪತ್ತಿರರ್ ಎಂದು ಕರೆದರೆ, ಉಪಮನ್ಯು ಶಿವಭಕ್ತಿ ವಿಲಾಸ, ಶಿವರಹಸ್ಯ, ಚೇರಮಾಂಕನ ಚೇರಮಕಾವ್ಯ,

ಶಾಂತಲಿಂಗ ದೇಶಿಕನ ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರಗಳಲ್ಲಿ ಭದ್ರ ಗಾಯಕನೆಂದು ಕರೆಯಲಾಗಿದೆ. ಲಕ್ಕಣ್ಣದಂಡೇಶ ಹಾಗೂ ವಿರೂಪಾಕ್ಷ ಪಂಡಿತರು ತಿರುನೀಲಕಂಠಪಾಣರೆಂದು ಕರೆದರೆ, ಕುಮಾರ ಚೆನ್ನಬಸವ ಹಾಗೂ ಗುರುರಾಜ ಚಾರಿತ್ರದ ಕರ್ತೃ ಸಿದ್ದನಂಜೇಶ — ಇವರು ರಾಗಸಾಂಕನೆಂದು ಕರೆದಿರುವರು. ಚೇರಮಾನ್ ಪೆರುಮಾಳ್‌ನ ಬಳಿಗೆ ಬರುವ ಪಾಣಪತ್ತಿರನು ವರಗುಣನ ಆಸ್ಥಾನದಲ್ಲಿ ಸಂಗೀತವಿದ್ವಾಂಸನಾಗಿದ್ದು, ಈ ವರಗುಣನು ಎರಡನೇ ವರಗುಣನ ತಾತನಾದ ಮೊದಲನೇ ವರಗುಣನಾಗಿರ ಬೇಕು ಎಂದು ದಿ॥ ಕೆ. ಶ್ರೀನಿವಾಸ ಪಿಳ್ಳೈಯವರು ಅಭಿಪ್ರಾಯಪಡುವರು. ಚೇರಮನು ಗಾಯಕನಿಗೆ ಚಿನ್ನ,ರತ್ನಾಭರಣ, ದಿವ್ಯವಸ್ತ್ರ, ಆನೆ, ಕುದುರೆಗಳ ಜೊತೆಗೆ ತನ್ನ ಸಮಸ್ತ ರಾಜ್ಯವನ್ನೂ ಕೊಡ ಹೊರಡುವನು. ಗಾಯಕನು ರಾಜ್ಯವನ್ನು ಸ್ವೀಕರಿಸಲು ಒಪ್ಪುವುದಿಲ್ಲ. ಆದರೆ ಲಕ್ಕಣ್ಣದಂಡೇಶ ಹಾಗೂ ವಿರೂಪಾಕ್ಷ ಪಂಡಿತರು ಗಾಯಕ ತಿರುನೀಲಕಂಠಪಾಣರಿಗೆ ಚೇರಮನು ಭೂಮಿ ಭಂಡಾರಗಳನ್ನು ಕೊಟ್ಟು ಕೈಲಾಸಕ್ಕೆ ನಡೆದನೆಂದು ಹೇಳುವರು. (ತಮಿಳು ನಾಡಿನ ಅರುವತ್ತು ಮೂವರು ಭಕ್ತರುಗಳಲ್ಲಿ ತಿರುನೀಲಕಂಠ ಯಾಳ್ಪಾಣ ನಾಯನಾರನೂ ಒಬ್ಬನು. ಪೆರಿಯಪುರಾಣಂನಲ್ಲಿ ಇವನ ಕಥೆ ಬಂದಿದೆ. 'ಯಾಟ್' ಎಂಬ ವಾದ್ಯವನ್ನು (ಇದು ವೀಣೆಯಂತಿರುವ ಒಂದು ವಾದ್ಯ) ನುಡಿಸುವುದರಲ್ಲಿ ಪ್ರಸಿದ್ಧನಾದ ಪಾಣರ ಕುಟುಂಬಕ್ಕೆ ಸೇರಿದವನಾದ ತಿರುನೀಲ ಕಂಠ ಯಾಳ್ಪಾಣನು ತಿರುಜ್ಞಾನ ಸಂಬಂಧರ ಜೊತೆ ಕ್ಷೇತ್ರ ಸಂಚಾರಮಾಡಿ ಎಲ್ಲ ದೇವಾಲಯಗಳಿಗೂ ಹೋಗಿ ಅವರ ಹಾಡುಗಳಿಗೆ ಹೊಂದುವಂತೆ ಯಾಟನ್ನು ನುಡಿಸುತ್ತಿದ್ದನು. ಜಾತಿಯಲ್ಲಿ ಉತ್ತಮನಲ್ಲದ ಇವನನ್ನು ಬ್ರಾಹ್ಮಣರು ನಡೆಸುವ ಯಜ್ಞವೇದಿಕೆಯ ಬಳಿಗೆ ಕರೆದೊಯ್ದಾಗ ಅಗ್ನಿಷ್ಟಿಕೆಯ ಅಗ್ನಿಯು ಕಳೆಗುಂದದೆ ಪ್ರಜ್ವಲಿಸಿ ಉರಿಯಿತೆಂದು ಹೇಳಲಾಗಿದೆ. ಈತನಿಗೂ ಚೇರಮ ನಲ್ಲಿಗೆ ಶಿವನಿಂದ ಓಲೆತರುವ ಗಾಯಕನಿಗೂ ಯಾವ ಸಂಬಂಧವೂ ಇಲ್ಲ. (ಲಕ್ಕಣ್ಣದಂಡೇಶ ಹಾಗೂ ವಿರೂಪಾಕ್ಷ ಪಂಡಿತರು ಇವರಿಬ್ಬರನ್ನೂ ಸಮೀಕರಿಸಿ ದಂತೆ ತೋರುತ್ತದೆ.)ಚೇರಮಾಂಕ,ಕುಮಾರ ಚೆನ್ನಬಸವ, ಸಿದ್ಧನಂಜೇಶ ಹಾಗೂ ಶಾಂತಲಿಂಗದೇಶಿಕರಲ್ಲಿ ಈ ಪ್ರಸಂಗ ಪ್ರಚಲಿತವಿರುವ ಕಥೆಗಿಂತ ಸ್ವಲ್ಪ ಭಿನ್ನ ವಾಗಿದ್ದು ಕಲ್ಪನೆಯ ರಂಗು ಪಡೆದಿದೆ. (ವಿವರಣೆಗಳಿಗೆ ನೋಡಿ ಪು. ೩೩–೩೪;

೩೯ ; ೪೭–೪೯). ಈ ನಾಲ್ವರಲ್ಲೂ ಕಥೆ ಸ್ವಾರಸ್ಯಕರವಾಗಿ ಬೆಳೆದಿದೆ. ಸಿದ್ಧನಂಜೇಶ ಹೊರತಾಗಿ ಉಳಿದವವರು ಗಾಯಕನ ಕಥೆಯಲ್ಲಿ ವಿಭೂತಿ ಮಹಿಮೆಯನ್ನು ಸಾರಲು ಪ್ರಯತ್ನಿಸಿದಂತಿದೆ. ಸಿದ್ಧನಂಜೇಶನ ಪ್ರಕಾರ, ರಾಗರಸಾಂಕನೆಂಬ ಭಕ್ತನು ಶಿವಭಕ್ತರ ಮನೆಗೆ ಹೋಗಿ ಹಾಡಿ ಕಾಯಕದಿಂದ ಬಂದುದನ್ನು ಜಂಗಮ ದಾಸೋಹಕ್ಕೆ ವಿನಿಯೋಗಿಸುತ್ತಿದ್ದನು. ಒಮ್ಮೆ ಇವನೊಡನೆ ವಾದಿಸಲೆಂದು ಬುಧನೊಬ್ಬನು ಬರಲು, ಭಕ್ತಾನುಕಂಪಿಯಾದ ಶಿವನು ತನ್ನ ಭಕ್ತ ರಾಗರಸಾಂಕನನ್ನು ರಕ್ಷಿಸಲೆಂದು ಹಾಡುಗಾರನೊಬ್ಬನ ವೇಷ ಧರಿಸಿ ಆ ವಿದ್ವಾಂಸನ ಬಳಿಗೆ ಬಂದು ಹಾಡುವನು. ವಿದ್ವಾಂಸನು ನೀನಾರೆಂದು ವಿಚಾರಿಸಲು ಅದಕ್ಕೆ ಹುಸಿವೇಷದ ಶಿವನು ತಾನು ರಾಗರಸಾಂಕನ ಸೇವಕನೆನ್ನುವನು. ನಿನಗೆ ರಾಗರಸಾಂಕನು ವಿದ್ಯವ ಕಲಿಸಿದನೆ ? ಎಂದು ವಿದ್ವಾಂಸನು ಕೇಳಲು, "ರಾಗರಸಾಂಕನು ನಿತ್ಯವೂ. ಗಾನಾಮೃತವನ್ನು ಪ್ರೀತಿಯಿಂದ ಶಿವನಿಗೆ ಸಮರ್ಪಿಸುತ್ತಿರಲು ಅದನ್ನು ಹೊರಗಿದ್ದು ಕೇಳಿ ಇದಿಷ್ಟನ್ನು ಕಲಿತೆ. ಆತನಿಂದ ಎಲ್ಲವನ್ನೂ ಕಲಿತದ್ದೇ ಆದರೆ ಭೂಮಂಡಲದಲ್ಲಿ ಬಿರುದಾಂತ ಗಾನಜ್ಞರೆಲ್ಲರನ್ನು ಜರಿದು ಸೋತವರ ಕೈಯಿಂದ ಸೇವೆಯನ್ನು ಸ್ವೀಕರಿಸುವೆನು" ಎಂದು ಹುಸಿ ವೇಷದ ಶಿವನು ಉತ್ತರಿಸುವನು. ಆ ಮಾತು ಕೇಳಿದ ವಿದ್ವಾಂಸನು ಹೆದರಿ ಮುಖದೋರದೆ ಓಡಿದನು(ಸಂ.೭ ಪ.೩೨–೩೩). ಸಿದ್ಧನಂಜೇಶನು ಶಿವ ಭಕ್ತಾನುಕಂಪಿ ಎಂದು ಸಾರಲು ಈ ಕಥೆ ಹೇಳುವನು. ಸುರಂಗನಲ್ಲಿ ಓಲೆಯ ಪ್ರಸಂಗವೇ ಬರುವುದಿಲ್ಲ. ತಿರುವಂಜಕಳನಾಥನ ಇದಿರಿನಲ್ಲಿ ವೀಣೆಯಿಂದ ತಿರುಪಾಡನ್ನು ಮಧುರವಾಗಿ ತಿರುನೀಲಕಂಠಪಾಣರು ನುಡಿಸುತ್ತಿರಲು ಅದನ್ನು ಕೇಳಿದ ಚೇರಮನು ಆ ವೀಣೆಯ ಮಧುರ ನಾದಕ್ಕೆ ಮೆಚ್ಚಿ ಬಹುಮಾನವಾಗಿ ಅವರಿಗೆ ರತ್ನಪೀಠವನ್ನು ಕೊಡುವನು. ಇದು ಸುರಂಗನಲ್ಲಿ ಮಾತ್ರ ಕಂಡುಬರುತ್ತದೆ.

ಚೇರಮನು ನಂಬಿಯಣ್ಣನ ಮಹಿಮೆಯನ್ನು ಕೇಳಿ ತಿರುವಾರೂರಿಗೆ ಅವನನ್ನು ನೋಡಲು ಬಂದುದನ್ನು ಹರಿಹರನು 'ನಂಬಿಯಣ್ಣನ ರಗಳೆ'ಯಲ್ಲಿ ಹೇಳಿರುವನು. ನಾಟ್ಯಮೂರ್ತಿ ಶಿವನ ಪಾದದಂದುಗೆಯ ಮಧುರ ಧ್ವನಿಯನ್ನು ಚೇರಮನು ನಿತ್ಯವೂ ಕೇಳುತ್ತಿದ್ದ ಮಹಿಮಾವಿಶೇಷವನ್ನು ಕನ್ನಡ,

ತಮಿಳು[19], ಸಂಸ್ಕೃತ ಹಾಗೂ ತೆಲುಗು ಕೃತಿಗಳು ಹೇಳುತ್ತವೆ. ಹರಿಹರ ಹೇಳದಿರುವುದಕ್ಕೆ ಕಾರಣ ಸ್ಪಷ್ಟವಾಗಿ ಗೊತ್ತಾಗುವುದಿಲ್ಲ.' ಬಹುಶಃ, ಅದು ಅವನಿಗೆ ತಿಳಿಯದಿರಬಹುದು. ಚೇರಮ ನಂಬಿಯಣ್ಣನನ್ನು ಕಾಣಲು ಬಂದಾಗ ಅವನು ಗದ್ದುಗದಾಟದಲ್ಲಿ ನಿರತನಾಗಿದ್ದಂತೆ ಹರಿಹರ ನಿರೂಪಿಸುವನು. ಈ ಪ್ರಸಂಗ ಪೆರಿಯಪುರಾಣಂನಲ್ಲಿಯಾಗಲೀ, ಸಂಸ್ಕೃತ ಕೃತಿಗಳಲ್ಲಿಯಾಗಲೀ ಕಂಡುಬರುವುದಿಲ್ಲ. ಹರಿಹರನಿಗೆ ಈ ಪ್ರಸಂಗ ನಿರೂಪಣೆಗೆ ಪ್ರೇರಣೆ ನೀಡಿದ ಆಕರಗ್ರಂಥವಾವುದೆಂಬುದು ತಿಳಿಯುವುದಿಲ್ಲ. ಶಂಕರದೇವನೂ 'ಚೇರಮನ ರಗಳೆ'ಯಲ್ಲಿ ಗದ್ದುಗದಾಟದ ಪ್ರಸಂಗವನ್ನು ತಂದಿರುವನು. ಗದ್ದುಗ ದಾಟದಲ್ಲಿ ತಲ್ಲೀನನಾಗಿದ್ದ ನಂಬಿಯಣ್ಣನು ತನ್ನನ್ನು ಬೇಕೆಂದೇ ಅಹಂಕಾರದಿಂದ ನಿರ್ಲಕ್ಷಿಸಿದನೆಂದು ಚೇರಮನು ಕೋಪಗೊಳ್ಳುವನು. ಚೇರಮನು ಶಿವನು ನಂಬಿಗೆ ಕುಂಟಣಿತನಮಾಡುವುದನ್ನು, ನಿತ್ಯವೂ ಸಾವಿರ ಹೊನ್ನು ಕೊಡುವು ದನ್ನು ನಿಲ್ಲಿಸುವನೆಂದು ತೀರ್ಮಾನಿಸಿ ಶಿವನಲ್ಲಿಗೆ ಬಂದು ಆಣೆಯಿಡುವನು. ಆಣೆ ಕೇಳಿ ನಡುಗಿದ ಶಿವನು, ಇನ್ನು ನಂಬಿಯ ಮುಖವನ್ನು ನೋಡೆನು, ಪಡಿಯ ಕೊಡೆನು, ನಿನ್ನಾಣೆ ಎಂದು ಹೇಳಿ ತನ್ನ ನೆಚ್ಚಿನ ಭಕ್ತ ಚೇರಮನ ಕೋಪವನ್ನು ತಣಿಸುವನು. ಶಿವನ ನಿರೂಪದಂತೆ ಚೇರಮನು ನಂಬಿಯಣ್ಣನ ತಂದೆ-ತಾಯಿಯರ ಬಳಿಗೆ ಹೋಗಿ. ನಡೆದುದೆಲ್ಲವನ್ನೂ ಹೇಳುವನು. ರಗಳೆಯ ಕೊನೆಗೆ, ನಂಬಿಯಣ್ಣ ಚೇರಮನಲ್ಲಿಗೆ ಬಂದು ತನ್ನ ತಪ್ಪನ್ನು ಕ್ಷಮಿಸುವಂತೆ ಬೇಡಿಕೊಳ್ಳುವನು. ಈ ರೀತಿಯ ನಿರೂಪಣೆ ಶಂಕರದೇವ ನೊಬ್ಬನಲ್ಲಿ ಮಾತ್ರ ನೋಡುವೆವು. ತಮಿಳು-ಸಂಸ್ಕೃತ-ತೆಲುಗು ಕೃತಿಗಳಲ್ಲಿ ಈ ರೀತಿಯ ಕಥಾ ನಿರೂಪಣೆ ಕಾಣಬರುವುದಿಲ್ಲ.

ಶಾಂತಲಿಂಗದೇಶಿಕನು ಚೇರಮನು ರಾಜ್ಯವನ್ನು ತ್ಯಜಿಸಿ ಹೋದುದಕ್ಕೆ ವಿಚಿತ್ರವಾದ ಕಾರಣ ಕೊಡುವನು! ಚೇರಮನು ರಾಜ್ಯ ತೊರೆದುಹೋದ ಸಂಗತಿ

---

19. ತಮಿಳಿನಲ್ಲಿ ಈ ಪ್ರಸಂಗವನ್ನು ಶೇಕ್ಕಿಳಾರ್ ಹೇಳಿರುವನು. ಆದರೆ ಅವನ ಕೃತಿಗೆ ಮೂಲ ಆಕರ ಗ್ರಂಥವಾದ ನಂಬಿಯಾಂಡಾರ್ ನಂಬಿಯ 'ತಿರುತೊಂಡರ್ ತಿರುವಂದಾದಿ'ಯಲ್ಲಿ ಇದು ಬಂದಿಲ್ಲ.

ತಿಳಿದ ರಾಜೇಂದ್ರಚೋಳ ಹಾಗೂ ನಂಬಿಯಣ್ಣರು ತಿರುವಂಜಕಳನಾಥನನ್ನು 'ನಿಮ್ಮ ಪಾದಸೇವೆ ಮಾಡುವ ಚೇರಮರಾಯನನ್ನೇಕೆ ಕಳುಹಿಸಿಬಿಟ್ಟಿರಿ' ಎಂದು ಕೇಳುವರು. ಶಿವನು ಲಿಂಗದೊಳಗಿದ್ದು ಚೇರಮನನ್ನು ರಾಜ್ಯ ಬಿಟ್ಟುಹೋಗುವುದೇಕೆ ? ಎಂದು ಕೇಳುವನು. 'ನಿಮ್ಮ ನಾಟ್ಯವನ್ನು ತೋರಿದರೆ ಹೋಗಲೊಲ್ಲೆನು ; ನಿಮ್ಮ ನಾಟ್ಯವ ನೋಡುವವರೆಗೂ ಊಟವನೊಲ್ಲೆನು" ಎಂದು ಚೇರಮ ಹಠಹಿಡಿಯಲು ಶಿವ ಅವನಿಗೆ ನಿತ್ಯವೂ ತನ್ನ ಪಾದದಂದುಗೆಯ ಧ್ವನಿಯನ್ನು ಕೇಳಿಸಲು ಒಪ್ಪುವನು. ಈ ರೀತಿಯ ನಿರೂಪಣೆಯನ್ನು ಶಾಂತಲಿಂಗ ದೇಶಿಕ ಹಾಗೂ ಉತ್ತರದೇಶದ ಬಸವಲಿಂಗರಲ್ಲಿ ಕಾಣಬಹುದು. ಚೇರಮನು ನಂಬಿಯಣ್ಣನಲ್ಲಿ ತಂಗಿದ್ದಾಗ ಶಿವಪೂಜಾ ನಂತರ ಆರೋಗಣೆಯ ಸಂದರ್ಭದಲ್ಲಿ ಪಾಯಸವನ್ನು ಬಡಿಸಲು ಚೇರಮ ವ್ರತಭಂಗವಾಗುವುದೆಂದು ಅದನ್ನು ನಿರಾಕರಿಸುವನು. ಈ ಬಗೆಯ ಕಥಾ ನಿರೂಪಣೆಯನ್ನು ಮೊದಲಿಗೆ ನಾವು ಕಾಣುವುದು ಪಾಲ್ಕುರಿಕೆ ಸೋಮನಾಥನ 'ಪಂಡಿತಾರಾಧ್ಯ ಚರಿತ್ರ'ದಲ್ಲಿ. ಇವನನ್ನು ವಿರುಪರಾಜ, ಚೇರಮಾಂಕ ಹಾಗೂ ಕುಮಾರ ಚೆನ್ನಬಸವರು ಅನುಸರಿಸಿ ಈ ಪ್ರಸಂಗವನ್ನು ತಮ್ಮ ಕೃತಿಗಳಲ್ಲೂ ತಂದಿರುವರು. ನಂಬಿಯಣ್ಣನ ಆತಿಥ್ಯವನ್ನು ಸ್ವೀಕರಿಸಿ ಚೇರಮನು ತನ್ನ ಪಟ್ಟಣಕ್ಕೆ ಹೊರಟಾಗ ನಂಬ್ಯಣ್ಣನು ಅವನಿಗೆ ರೆಕ್ಕೆಗಳಿರುವ ಕುದುರೆಯನ್ನು ಕಾಣಿಕೆಯಾಗಿ ಅರ್ಪಿಸಿದನೆಂದು ಸುರಂಗ ಕವಿಯು ಹೇಳುವನು (ಈ ರೀತಿ ಹೇಳಿರುವುದು ಸುರಂಗನೊಬ್ಬನಲ್ಲಿ ಮಾತ್ರ ಕಂಡುಬರುತ್ತದೆ).

ನಂಬಿ-ಚೇರಮರು ತಿರುವಂಜಕ್ಕಳಂಗೆ ಬರುವ ಮಾರ್ಗದಲ್ಲಿ ತುಂಬಿದ ಪ್ರವಾಹದಿಂದ ಹರಿಯುತ್ತಿದ್ದ ಕಾವೇರಿ ನದಿಯನ್ನು ದಾಟಬೇಕಾದ ಪ್ರಸಂಗ ಬಂದಾಗ, ನಂಬಿಯು ತಿರುಪಾಟನ್ನು ಹಾಡಲು ಕಾವೇರಿ ಹರಿಯುವುದನ್ನು ನಿಲ್ಲಿಸಿ ಅವರಿಗೆ ದಾರಿಮಾಡಿಕೊಟ್ಟಿತೆಂದು ಶೇಕ್ಕಿಳಾರನು ಹೇಳಿರುವನು. ಸಂಸ್ಕೃತದಲ್ಲಿ ಉಪಮನ್ಯು ಶಿವಭಕ್ತಿ ವಿಲಾಸದಲ್ಲೂ ಈ ಪ್ರಸಂಗ ಬರುತ್ತದೆ. ಆದರೆ, 'ಶಿವರಹಸ್ಯ'ದಲ್ಲಿ ಇದು ಕಾಣುವುದಿಲ್ಲ. ತೆಲುಗಿನಲ್ಲಿಯೂ ಇದು ಬರುವುದಿಲ್ಲ. ಕನ್ನಡದಲ್ಲಿ 'ಚೇರಮ ಕಾವ್ಯ'ದಲ್ಲಿ ಹಾಗೂ ಹರಿಹರೇತರ ಕೃತ ವಿರೂಪಾಕ್ಷಾಂಕಿತದ 'ಚೇರಮನಾಯನಾರ್ ರಗಳೆ'ಯಲ್ಲಿ ಇದು ಕಂಡು

ಬರುತ್ತದೆ. ರಗಳೆಯಲ್ಲಿನ ಕಥಾ ನಿರೂಪಣೆ ಶೇಕ್ಕಿಳಾರನಿಗಿಂತ ಭಿನ್ನವಾಗಿದ್ದು, ಸ್ವಾರಸ್ಯಕರವಾಗಿದೆ (ವಿವರಗಳಿಗೆ ರಗಳೆಯಲ್ಲಿನ ಈ ಸಂದರ್ಭದ ಕಥಾಭಾಗ ವನ್ನು ನೋಡಿ). ಚೇರಮಾಂಕನ ನಿರೂಪಣೆ ಶೇಕ್ಕಿಳಾರನನ್ನು ಅನುಸರಿಸಿದೆ. ಶಾಂತಲಿಂಗ ದೇಶಿಕನು ಚೇರಮನು ಕುತಾಂಡಿದೇವರೆಡೆಗೆ ಹೋಗಲು ಸಮುದ್ರವು ದಾರಿಬಿಟ್ಟುಕೊಟ್ಟಿತೆಂದು ಹೇಳುವನು. ಇವನೊಬ್ಬನೇ ಈ ರೀತಿ ಹೇಳಿ ರುವುದು.

ಮೊಸಳೆ ನುಂಗಿದ ನಂಬಿ ಎಂಬ ಹೆಸರಿನ ಬಾಲಕನನ್ನು ಮೊಸಳೆಯ ಬಾಯಿಂದ ಹೊರಬರಿಸಿದ ನಂಬಿಯಣ್ಣನ ಮಹಿಮೆಯ ಕಥೆ ಶೇಕ್ಕಿಳಾರನಲ್ಲಿ ಬಂದಿದೆ. ಸಂಸ್ಕೃತದ ಉಪಮನ್ಯು 'ಶಿವಭಕ್ತಿ ವಿಲಾಸ'ದಲ್ಲಾಗಲೀ 'ಶಿವ ರಹಸ್ಯ'ದಲ್ಲಾಗಲೀ ಈ ಕಥೆ ಬಂದಿಲ್ಲ. ವನ್‌ತೊಂಡನು (ನಂಬಿಯಣ್ಣನು) ಚೇರಮಾನ್ ಪೆರುಮಾಳನನ್ನು ನೋಡಲು ಚೇರನಾಡಿಗೆ ಹೋಗುವಾಗ ದಾರಿಯಲ್ಲಿ ಸಿಕ್ಕ ತಿರುಪ್ಪೊಕ್ಕುಳಿಯೂರ್ ಎಂಬಲ್ಲಿಗೆ ಬರಲು ಅಲ್ಲಿ ಮೇಲಣ ಘಟನೆ ನಡೆಯಿತೆಂದು ಶೇಕ್ಕಿಳಾರ್ ಹೇಳುವನು. ಪಾಲ್ಕುರಿಕೆ ಸೋಮ ನಾಥನ 'ಪಂಡಿತಾರಾಧ್ಯ ಚರಿತ್ರ'ದಲ್ಲಿ ಈ ಘಟನೆ ಸ್ವಲ್ಪ ವ್ಯತ್ಯಾಸಗೊಂಡು ಬಂದಿದೆ. ಚೇರಮನು ನಂಬಿಯಣ್ಣನ ಮಹಿಮೆಯನ್ನು ಕೇಳಿ ತಿರುವಾರೂರಿಗೆ ಅವನನ್ನು ನೋಡಲು ಬರುವನು. ಚೇರಮನನ್ನು ನಂಬಿಯಣ್ಣನು ಗೌರವ ಪೂರ್ವಕವಾಗಿ ಇದಿರುಗೊಂಡು ಅವನನ್ನು ಕೆಲವು ದಿವಸ ತನ್ನಲ್ಲಿಯೇ ಇರಿಸಿಕೊಳ್ಳುವನು. ನಂಬಿಯಣ್ಣನೊಡನೆ ಸಂತೋಷದಿಂದ ಹಲವು ದಿವಸ ಕಳೆದು ಚೇರಮ ತನ್ನ ಪಟ್ಟಣಕ್ಕೆ ಹಿಂತಿರುಗಲು ಯೋಚಿಸುವನು. ಚೇರಮ ನನ್ನು ಬಿಟ್ಟಿರಲಾಗದೆ ನಂಬಿಯಣ್ಣನು ಅವನೊಡನೆ ಆವಲೂರಿಗೆ ಬರುವನು. ಅಲ್ಲಿ ಹರಿವ ಕಾವೇರಿಯ ದಡದಲ್ಲಿನ ದೇವಾಲಯವೊಂದರಲ್ಲಿ ಮಿತ್ರರಿಬ್ಬರೂ ವಿಶ್ರಮಿಸಿ ಓಲಗಗೊಟ್ಟಿರಲು ಅಲ್ಲಿ ಮೇಲಣ ಘಟನೆ ನಡೆಯುತ್ತದೆ. ಪಾಲ್ಕುರಿಕೆ ಸೋಮನಾಥನ 'ಪಂಡಿತಾರಾಧ್ಯ ಚರಿತ್ರ'ವನ್ನು ಕನ್ನಡಕ್ಕೆ ಪರಿವರ್ತಿಸಿರುವ ನೀಲಕಂಠಾಚಾರ್ಯನು ತನ್ನ 'ಆರಾಧ್ಯ ಚಾರಿತ್ರ'ದಲ್ಲಿ ಮೂಲಾನುಸಾರಿಯಾಗಿ ಈ ಘಟನೆಯನ್ನು ನಿರೂಪಿಸಿರುವನು. ನಂಬಿ-ಚೇರಮರು ಜೊತೆಗೂಡಿ ಬರುತ್ತಿರುವಾಗ ಈ ಘಟನೆ ನಡೆಯಿತೆಂದು

ಮೊದಲಿಗೆ ಪಾಲ್ಕುರಿಕೆ ಸೋಮನಾಥನು ಹೇಳಿರುವನು. (ಹೀಗೆ ಹೇಳಲು ಇವನಿಗೆ ಆಧಾರವಾವುದೆಂಬುದು ಸ್ಪಷ್ಟವಾಗುವುದಿಲ್ಲ. ಇವನು ತನ್ನ ಕೃತಿಯಲ್ಲಿ ಬರುವ ಶಿವಭಕ್ತರ ಕಥೆಗಳ ನಿರೂಪಣೆಗೆ ಲಿಖಿತ ದಾಖಲೆಯನ್ನು ಆಧರಿಸದೆ, ಬಾಯಿಂದ ಬಾಯಿಗೆ ದಾಟಿಬಂದ ಜನಪದದ ಹೇಳಿಕೆಯನ್ನು ಆಧರಿಸಿದಂತೆ ತೋರುತ್ತದೆ20). ಈ ಪ್ರಸಂಗದ ನಿರೂಪಣೆಯಲ್ಲಿ ಪಾಲ್ಕುರಿಕೆ ಸೋಮನಾಥನನ್ನು ವಿರುಪರಾಜ, ಚೇರಮಾಂಕ, ಶಾಂತಲಿಂಗದೇಶಿಕ—ಇವರುಗಳು ಅನುಸರಿಸಿರುವರು. ಹರಿಹರನ 'ನಂಬಿಯಣ್ಣನ ರಗಳೆ'ಯಲ್ಲಿ ಈ ಪವಾಡ ಕಥೆ ಶೇಕ್ಕಿಳಾರನ ನಿರೂಪಣೆಗೆ ಹೆಚ್ಚು ಸಮೀಪವೆನ್ನುವಂತೆ ಬಂದಿದೆ.

ಪರವೆಯ ಮನೆಯಲ್ಲಿ ನಂಬಿಯಣ್ಣನು ಚೇರಮನನ್ನು ಕೆಲ ದಿವಸವಿರಿಸಿಕೊಂಡು ಆದರಿಸಿದನೆಂಬ ವಿವರ ಹರಿಹರನ 'ನಂಬಿಯಣ್ಣನ ರಗಳೆ'ಯಲ್ಲಿ ಬರುತ್ತದೆ. ವಿರುಪರಾಜನ ಪ್ರಕಾರ ಚೇರಮನ ಆಹ್ವಾನವನ್ನು ಮನ್ನಿಸಿ ನಂಬಿಯಣ್ಣನು ಪರವೆ ಸಂಕಿಲಿಯರೊಡನೆ ಅವನ ಪಟ್ಟಣಕ್ಕೆ ಹೊರಡುವನು. ಚೇರಮಾಂಕನಲ್ಲೂ ಚೇರಮನು ಪರವೆ ಸಂಕಿಲೆಯರ ವಿನಯೋಪಚಾರವನ್ನು ಪಡೆದಚಿತ್ರ ಬರುತ್ತದೆ. ಹರಿಹರೇತರಕೃತ ವಿರೂಪಾಕ್ಷಾಂಕಿತದ 'ಚೇರಮ ನಾಯನಾರ್ ರಗಳೆ'ಯಲ್ಲಿ ಚೇರಮ ಮೊದಲಿಗೆ ಪರವೆಯ ಆದರಾತಿಥ್ಯವನ್ನು ಸ್ವೀಕರಿಸುವನು. ನಂತರ, ತಿರುವತ್ತಿಯೂರಲ್ಲಿ ಸಂಕಿಲೆಯ ಉಪಚಾರವನ್ನು ಸ್ವೀಕರಿಸುವನು. ನಂಬಿಯಣ್ಣ ಸಂಕಿಲೆಯ ವಿರಹದ ಭೀತಿಯನ್ನೂ, ಅದರಿಂದುಂಟಾದ ದುಃಖವನ್ನೂ ಬಿಡಿಸಿ ಚೇರಮನೊಡನೆ ಅವನ ಪಟ್ಟಣಕ್ಕೆ ಪ್ರಯಾಣಮಾಡುವನು. ಚೇರಮನ ಪತ್ನಿಯ ಬಗೆಗೆ ಶಾಂತಲಿಂಗದೇಶಿಕ ಹಾಗೂ ಉತ್ತರದೇಶದ ಬಸವಲಿಂಗರ ಹೊರತಾಗಿ ಬೇರೆ ಯಾರಿಂದಲೂ ವಿವರಗಳು ಸಿಗುವುದಿಲ್ಲ. ಚೇರಮನು ತನ್ನ ಪತ್ನಿಯಿಂದ ರುದ್ರಾಕ್ಷಿಯ ಮಹತ್ವವನ್ನು ತಿಳಿದು ತನ್ನ ಎಂಬತ್ತು ಸಾವಿರ ಕುದುರೆಗಳಿಗೆ ಹಲ್ಲಣ ಹಕ್ಕರಿಕೆ

---

20. ಇದರ ಬಗೆಗೆ ಹೆಚ್ಚಿನ ವಿವರಗಳನ್ನು 'ಬಸವ ಪಥ' ಸಂಪುಟ ೩ ಸಂಚಿಕೆ ೬–೭ರಲ್ಲಿ ಬಂದಿರುವ ನನ್ನ ಲೇಖನ 'ತೆಲುಗು ಸಾಹಿತ್ಯದಲ್ಲಿ ನಂಬಿಯಣ್ಣನ ಕಥೆ'ಯನ್ನು ನೋಡಿ.

ಮುಖರೆಂಬ ರಾವುತರ ಮೈಜೋಡು ಮೊದಲಾದುವೆಲ್ಲವೂ ರುದ್ರಾಕ್ಷಿಯಿಂದ ಸಂಜೋಗವ ಮಾಡಿದನೆಂದು ಶಾಂತಲಿಂಗದೇಶಿಕ ಹಾಗೂ ಉತ್ತರದೇಶದ ಬಸವಲಿಂಗರು ಹೇಳುವರು.

ಶೇಕ್ಕಿಳಾರನು ಚೇರ–ಚೋಳ–ಪಾಂಡ್ಯ ಅರಸರು ಮಧುರೆಯಲ್ಲಿ ಒಂದು ಗೂಡಿ ಕೆಲದಿವಸ ಸಂತೋಷದಿಂದ ಕಾಲಕಳೆದರೆಂದು ಹೇಳುವನು. ಮಧುರೆ ಯಲ್ಲಿ ಪಾಂಡ್ಯರಾಜನ ಅಳಿಯನಾಗಿ ಚೋಳರಾಜನು ತಂಗಿದ್ದಾಗ ಅಲ್ಲಿಗೆ ಚೇರ ಹಾಗೂ ಆರೂರರು ಬಂದರೆಂದೂ ಅವರು ಜೊತೆಗೂಡಿ ಶಿವಾಲಯಗಳ ದರ್ಶನಮಾಡಿದರೆಂದೂ ಶೇಕ್ಕಿಳಾರ್ ನಿರೂಪಿಸುವನು. ಮಧುರೆಯ ಪಾಂಡ್ಯರಾಜನ ಹಾಗೂ ಅವನಲ್ಲಿ ತಂಗಿದ್ದ ಅವನ ಅಳಿಯನಾಗಿದ್ದ ಚೋಳ ರಾಜನ ಹೆಸರನ್ನು ಶೇಕ್ಕಿಳಾರ್ ಹೇಳಿಲ್ಲ. ಚೇರ–ಚೋಳ–ಪಾಂಡ್ಯರ ಭೇಟಿಯ ಪ್ರಸ್ತಾಪ ಸಂಸ್ಕೃತ ಕೃತಿಯಾದ 'ಶಿವರಹಸ್ಯ'ದಲ್ಲಿ ಬರುವುದಿಲ್ಲ, ಆದರೆ ಉಪಮನ್ಯು 'ಶಿವಭಕ್ತ ವಿಲಾಸ'ದಲ್ಲಿ ಇದು ಬರುತ್ತದೆ. ಚೇರಮಾಂಕನು ಪಾಂಡ್ಯರಾಜನಾದ ವೀರಪಾಂಡ್ಯನು ತನ್ನ ಕುವರಿಯನ್ನು ಚೇರಮನಿಗೆ ಕೊಟ್ಟ ನೆಂದು ಹೇಳುವನು. ಚೇರ ಹಾಗೂ ಪಾಂಡ್ಯ ಅರಸರ ನಡುವೆ ವಿವಾಹದ ಮೂಲಕ ಮಧುರ ಸಂಬಂಧವೇರ್ಪಟ್ಟಿತೆಂದು ಚೇರಮಾಂಕ ನಿರೂಪಿಸುವನು. ಅದೃಶ್ಯಕವಿ (೧೫೨೫) ಹಾಗೂ ಮುಖಬೋಳು ಸಿದ್ಧರಾಮರು ರಾಜೇಂದ್ರ ಚೋಳ, ಚೇರಮ, ಪಾಂಡ್ಯ ರಾಜರುಗಳು ಒಂದುಗೂಡಿ ಅಮರೇಂದ್ರನೊಡನೆ ಕಾದಿ ಶಿವಪದವನ್ನು ಹೊಂದದಿರು ಎನ್ನುವನು21. ಈ ಸಂದರ್ಭದ ವಿವರ ವನ್ನು ಮುಖಬೋಳು ಸಿದ್ಧರಾಮ ತನ್ನ ಕೃತಿಯಲ್ಲಿಕೊಟ್ಟಿಲ್ಲ. ಚೇರ,

---

21. ಅದೃಶ್ಯಕವಿಯು ದೇವೇಂದ್ರನ ಅಹಂಕಾರವನ್ನು ಮುರಿದವರು ಕೇರಳ ದೇಶದ ಮಹಾದಧಿಪುರದರಸು ಚಾರಮ, ಕಂಚಿಯರಸ ರಾಜೇಂದ್ರ ಚೋಳ ಹಾಗೂ ಮಧುರೆಯರಸ ಕೂನಪಾಂಡ್ಯರುಗಳೆನ್ನುವನು (ಸಂ. 18 ಪ. 47). ಕೂನ ಪಾಂಡ್ಯನು ಕರವೀರಪುರದರಸು ರಾಜೇಂದ್ರ ಚೋಳನ ತನುಜೆ ಮಂಗಾಯಕ್ಕ ರಸಿಯನ್ನು ಮದುವೆಯಾದನೆಂದೂ ಅವನು ಹೇಳುವನು (ಸಂ.18 ಪ. 33). ಕೂನಪಾಂಡ್ಯನ ಬಗೆಗೆ ಕವಿ ಹೇಳುವ ಈ ವಿವರವು ಚಾರಿತ್ರಿಕ ಸತ್ಯವಲ್ಲ.

ಛೋಳ, ಪಾಂಡ್ಯರು ಅಮರೇಂದ್ರನೊಡನೆ ಕಾದಿದ ಪ್ರಸಂಗ ತಮಿಳು, ಸಂಸ್ಕೃತ ಕೃತಿಗಳಲ್ಲಿ ಕಂಡುಬರುವುದಿಲ್ಲ, ಕನ್ನಡ ಕೃತಿಗಳಲ್ಲಿ ಕಂಡುಬರುತ್ತದೆ. ಈ ಪ್ರಸಂಗವನ್ನು ಮೊತ್ತಮೊದಲಿಗೆ ಎಲ್ಲಿ, ಯಾರು ಹೇಳಿದರೆಂಬುದು ತಿಳಿಯದು. ಸದ್ಯಕ್ಕೆ ಈ ಉಲ್ಲೇಖ ನಮಗೆ ಮೊದಲಿಗೆ ಸಿಗುವುದು ಅದೃಶ್ಯಕವಿಯ 'ಪ್ರೌಢರಾಯನ ಕಾವ್ಯ'ದಲ್ಲಿ. 'ಮುಖಬೋಳು ಸಿದ್ಧರಾಮನ ನಂತರ ಈ ಪ್ರಸಂಗದ ಉಲ್ಲೇಖ ಶಾಂತಲಿಂಗದೇಶಿಕ ಹಾಗೂ ಉತ್ತರದೇಶದ ಬಸವಲಿಂಗರ ಕೃತಿಗಳಲ್ಲಿ ವಿವರಗಳೊಡನೆ ಸಿಗುತ್ತದೆ. ದೇವೇಂದ್ರನ ಗರ್ವಭಂಗಮಾಡಿದ ಈ ತಮಿಳರಸರ ಕಥೆ ಕಲ್ಪಿತ ಕಥೆಯೆಂದು (Myth) ಹೇಳಬಹುದು.

ಪಾಂಡ್ಯ, ಚೇರ, ಚೋಳ ಅರಸರು ಮಧುರೆಯಲ್ಲಿ ಒಟ್ಟಿಗೆ ಸೇರಿದರೆಂದು ಶೇಕ್ಕಿಳಾರ್ ಹೇಳುವನು. ಸಂಸ್ಕೃತ ಹಾಗೂ ಕನ್ನಡ ಕೃತಿಗಳಲ್ಲೂ ಇದರ ಪ್ರಸ್ತಾಪ ಬಂದಿದೆ. ಈ ಅರಸರ ಹೆಸರಿನ ಜೊತೆಗೆ ಪಲ್ಲವ ಅರಸನ ಹೆಸರೂ ಸೇರಿದೆ. ಶಿರ್ರಂಬಲಂನಲ್ಲಿರುವ ಪರಮಾತ್ಮನನ್ನು ಕುರಿತ ಪದಿಕದಲ್ಲಿ ಸುಂದರಮೂರ್ತಿಯು ಪಲ್ಲವ ಅರಸನ ಉಲ್ಲೇಖ ಮಾಡಿರುವನು. ಅಲ್ಲಿ ಪಲ್ಲವ ಅರಸನಿಗೆ ಕೊಡಬೇಕಾದ ಕಪ್ಪಕಾಣಿಕೆಗಳನ್ನು ಕೊಡದ ಅರಸರುಗಳನ್ನು ಶಿರ್ರಂಬಲಂನ ಪರಮಾತ್ಮನು ಶಿಕ್ಷಿಸುವನೆಂದು ಹೇಳಲಾಗಿದೆ. ಪಲ್ಲವ ಅರಸನನ್ನು ದಕ್ಷಿಣದ ರಾಜರುಗಳು ಅಂಗೀಕರಿಸಲು ಒಪ್ಪದಿದ್ದುದು ಇದರಿಂದ ಸ್ಪಷ್ಟವಾಗುತ್ತದೆ. ಇದಲ್ಲದೆ ಇನ್ನೊಂದೆಡೆಯಲ್ಲಿ, ನಾಟ್ಟಿಯತ್ತಾಂಗುಡಿಯ ದೇವರನ್ನು ಕುರಿತ ಪದಿಕದಲ್ಲಿ ಉದ್ದೇಶಪೂರ್ವಕವಾಗಿ ಸುಂದರಮೂರ್ತಿಯು ತನ್ನ ಮಿತ್ರನಾದ ಕೋಟ್ಪುಲಿಯ ರಣಪರಾಕ್ರಮವನ್ನು ಪ್ರಸ್ತಾಪಿಸಿರುವನು. ಅವನೇ ಮತ್ತೆ, ತನ್ನ 'ತಿರುತ್ತೊಂಡತ್ತೊಗೈ'ಯಲ್ಲಿ ತನ್ನ ವಿಜಯಗಳಿಂದ ಪ್ರಸಿದ್ಧನಾದ ಕೋಟ್ಪುಲಿಯನ್ನು ಹೊಗಳಿರುವನು. ಶೇಕ್ಕಿಳಾರನು ಕೋಟ್ಪುಲಿಯನ್ನು ಸಮಕಾಲೀನ ಅರಸನೊಬ್ಬನ ಸೇನಾಧಿಪತಿಯೆಂದು ಕರೆದಿರುವನು. (ಈ ಅರಸನು ಬಹುವಾಗಿ ಪಲ್ಲವ ಮೂರನೇ ನಂದಿವರ್ಮನಾಗಿರಬೇಕು.) 'ಪೆರಿಯಪುರಾಣಂ'ನಲ್ಲಿ ಕೋಟ್ಪುಲಿಯನ್ನು ಅವನ ಅರಸನು ಅವಸರವಾಗಿ ತನ್ನ ಶತ್ರುರಾಜರ ಸೈನ್ಯದ ಮೇಲೆ ದಾಳಿಮಾಡಲು ಕಳುಹಿಸಿದನೆಂದೂ ಆ ಯುದ್ಧದಲ್ಲಿ ಶತ್ರುಗಳನ್ನು ಸೋಲಿಸಿ ಕೋಟ್ಪುಲಿ ಖ್ಯಾತನಾದನೆಂದೂ ಹೇಳಲಾಗಿದೆ (ನೋಡಿ :

ಪೆರಿಯಪುರಾಣಂನಲ್ಲಿ ಬರುವ ಕೋಟ್ಪುಲಿನಾಯನಾರ್ ಪುರಾಣಂ). ಇದರಿಂದ ಕೋಟ್ಪುಲಿಯು ತೆಳ್ಳಾರಂನಲ್ಲಿ ದಕ್ಷಿಣದ ಅರಸರ ವಿರುದ್ಧ ಹೋರಾಡತೊಡಗಿದ್ದ ಪಲ್ಲವ ಅರಸನ ಸೈನಾಧಿಕಾರಿಗಳಲ್ಲಿ ಒಬ್ಬನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ.

ಪಾಂಡ್ಯ ಚೇರ ಚೋಳ ಅರಸರ ಹೆಸರುಗಳು ಶೇಕ್ಕಿಳಾರನಲ್ಲಿ ಕಂಡು ಬರುವುದಿಲ್ಲ. ಪೆರಿಯಪುರಾಣಂನಲ್ಲಿ ಹೇಳಿರುವ ಪ್ರಕಾರ ಆರೂರನು ಚೇರಮನ ಜೊತೆಯಲ್ಲಿ ಪಾಂಡ್ಯ ಅರಸನಲ್ಲಿಗೆ ಬರುವುದು ಅವನ ಜೀವಿತದ ಕೊನೆಯ ಘಟ್ಟದಲ್ಲಿ. ನಂಬಿ–ಚೇರಮರ ಕಾಲದಲ್ಲಿ (೯ನೇ ಶತಮಾನದ ಮೊದಲ ಅರ್ಧಭಾಗದಲ್ಲಿ) ತಮಿಳುನಾಡಿನ ಈ ಅರಸರುಗಳ ರಾಜಕೀಯ ಸಂಬಂಧ ಅಷ್ಟಾಗಿ ಚೆನ್ನಾಗಿರಲಿಲ್ಲವೆಂಬುದು ಚರಿತ್ರೆಯಿಂದ ತಿಳಿದು ಬರುತ್ತದೆ. ಪರಸ್ಪರ ವೈರಿಗಳಾಗಿ ಒಬ್ಬರ ಮೇಲೆ ಮತ್ತೊಬ್ಬರು ಕತ್ತಿಮಸೆಯುತ್ತಿದ್ದ ಇವರು ಮಧುರೆಯಲ್ಲಿ ಒಟ್ಟುಗೂಡಿದುದಾದರೂ ಹೇಗೆ ? ಇತಿಹಾಸದ ಪುಟಗಳಲ್ಲಿ ಇದಕ್ಕೆ ಉತ್ತರ ಸಿಗುವುದಿಲ್ಲ. ರಾಜ್ಯದ ಹಿತಸಂರಕ್ಷಣೆಯ ದೃಷ್ಟಿಯಿಂದ ಈ ಮೂವರು ಅರಸರು ಸಂಘಟಿತರಾಗಿ ಸ್ನೇಹವನ್ನು ಬೆಳೆಸಿದರು ಎಂದು ಹೇಳಬೇಕಾಗುತ್ತದೆ. ಶೇಕ್ಕಿಳಾರನು ಮಧುರೆಯಲ್ಲಿ ಪಾಂಡ್ಯರಾಜನ ಅಳಿಯನಾಗಿ ಚೋಳರಾಜನು ತಂಗಿದ್ದಾಗ ಅಲ್ಲಿಗೆ ನಂಬಿ ಹಾಗೂ ಚೇರನು ಬಂದರೆಂದು ಹೇಳುವನು. ಪಾಂಡ್ಯ ಹಾಗೂ ಚೋಳ ಅರಸರು ಬೆಳೆಯಿಸಿದ್ದ ರಕ್ತಸಂಬಂಧದ ಬಗೆಗೂ ಇತಿಹಾಸ ಮೌನವಾಗಿದೆ. ಕನ್ನಡದ ಚೇರಮಾಂಕ ಕವಿಯು ಪಾಂಡ್ಯ ಅರಸನಾದ ವೀರ ಪಾಂಡ್ಯನು ತನ್ನ ಕುವರಿಯನ್ನು ಚೇರಮನಿಗೆ ಕೊಟ್ಟನೆಂದು ಹೇಳುವನು. ಅದೃಶ್ಯಕವಿಯು ಮಧುರೆಯನ್ನು ಆಗ ಆಳುತ್ತಿದ್ದವನು ಕೂನಪಾಂಡ್ಯನೆಂದೂ ಇವನು ಕರವೀರಪುರದರಸು ರಾಜೇಂದ್ರ ಚೋಳನ ತನುಜೆ ಮಂಗಾಯಕ್ಕರಸಿಯನ್ನು ವಿವಾಹವಾಗಿದ್ದನೆಂದೂ ಹೇಳುವನು. ಇತಿಹಾಸದಲ್ಲಿ ಇದಕ್ಕೂ ಆಧಾರವಿಲ್ಲ. ಮಧುರೆಯ ಸೌಂದರಪಾಂಡ್ಯ, ಕಾಂಚೀಪುರದ ರಾಜೇಂದ್ರ ಚೋಳ, ಕೇರಳದೇಶದ ಮಹೋದಧಿಪುರದ ಚೇರಮ ರಾಯರು ಪರಮ ಮಿತ್ರರಾಗಿದ್ದು ಅಕಾರಣವಾಗಿ ತಮ್ಮ ಮೇಲೆ ಮುನಿದ ದೇವೇಂದ್ರನನ್ನೇ ಇವರು ಅವಮಾನಿಸಿದ ಕಥೆ ಕನ್ನಡ ಕೃತಿಗಳಲ್ಲಿ ಬಂದಿದ್ದು ಇದೂ ಸತ್ಯಕ್ಕೆ ದೂರವಾದ ಕಾಲ್ಪನಿಕ ಕಥೆಯಾಗಿದೆ. ಒಟ್ಟಿನಲ್ಲಿ, ಪಾಂಡ್ಯ– ಚೇರ–ಚೋಳ

ಅರಸರ ಈ ಸ್ನೇಹ ಸಂಬಂಧದ ಉಲ್ಲೇಖಗಳು ವಿದ್ವದ್‌ವಲಯದಲ್ಲಿ ಇನ್ನೂ ಚರ್ಚೆಗೆ ಆಸ್ಪದ ನೀಡಿವೆ. ಈ ಅರಸರ ಸ್ನೇಹ ಸಂಬಂಧದ ಬಗೆಗೆ ಸಧ್ಯದಲ್ಲಿ ಏನನ್ನೂ ಖಚಿತವಾಗಿ ಹೇಳಲಾಗದು.

ನಂಬಿಯಣ್ಣ ತನಗೆ ತಿಳಿಸದೆ ಕೈಲಾಸಕ್ಕೆ ಹೋದನೆಂಬ ಸುದ್ದಿ ತಿಳಿದ ಚೇರಮನು ಕೈಲಾಸಕ್ಕೆ ತನ್ನ ಬಲದೊಡನೆ ದಾಳಿಮಾಡಲು ತೆರಳಿದನೆಂದು ಹರಿಹರನ ನಂತರದ ಕನ್ನಡದ ಕೃತಿಗಳು ಹೇಳುತ್ತವೆ. ಶಂಕರದೇವನ 'ಚೇರಮನ ರಗಳೆ' ಈ ಪ್ರಸಂಗವನ್ನು ವೈಭವೀಕರಿಸಿದೆ. ಕೈಲಾಸಕ್ಕೆ ದಾಳಿಮಾಡಲು ಹೊರಟ ಚೇರಮ ದಾರಿತಿಳಿಯದೆ ಹುಡುಕಾಡುತ್ತಿರಲು ಗೊಗ್ಗವ್ವೆಯು ಅವನಿಗೆ ಕೈಲಾಸದ ದಾರಿ ತೋರಿಸಿದಳೆಂದು ಚೆನ್ನಬಸವಾಂಕನ (ಸು. ೧೫೫೦) ಮಹಾದೇವಿಯಕ್ಕನ ಪುರಾಣ ಸೂಚ್ಯವಾಗಿ ಹೇಳಿದರೆ, ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಹಾಗೂ ಸಿದ್ಧನಂಜೇಶನ (೧೫೫೦) ಗುರುರಾಜ ಚಾರಿತ್ರಗಳು ವಿವರವಾಗಿ ಆ ಪ್ರಸಂಗವನ್ನು ನಿರೂಪಿಸುವವು. ಕರ್ತೃಯಾರೆಂದು ತಿಳಿಯದ 'ಪುರಾತನದೇವಿಯರ ತ್ರಿವಿಧಿ'ಯ 'ಮೂರುಲೋಕಗಳರಿಯೆ ಚಾರಮರಾಯನಿಗೆ । ಮಾರಹರನೂರ ದಾರಿಯನು ತೋರಿಸಿದ । ನೀರೆ ಗೊಗ್ಗವ್ವೆ ಶರಣಾಗು' ಎಂಬ ಪದ್ಯವು ಇದೇ ಪ್ರಸಂಗವನ್ನು ಉಲ್ಲೇಖಿಸಿದೆ. ಶಂಕರದೇವನ 'ಚೇರಮನ ರಗಳೆ'ಯಲ್ಲೂ ಈ ಘಟನೆಯು ಉಲ್ಲೇಖವಿದೆ. ಈ ಪ್ರಸಂಗ ತಮಿಳು ಕೃತಿಗಳಲ್ಲಿ ಕಂಡುಬರುವುದಿಲ್ಲ. ಚೆನ್ನಬಸವಾಂಕನ ನಂತರ ಹುಟ್ಟಿಕೊಂಡ ಕಥೆ ಇದಾಗಿರಬಹುದು.

ಕೈಲಾಸಕ್ಕೆ ತಲೆಯಮೂರಿ ನಡೆದುಹೋಗುತ್ತಿದ್ದ ಕಾರಿಕಾಲಮ್ಮೆಯನ್ನು ಮಾರ್ಗಮಧ್ಯೆ ನಂಬಿ–ಚೇರಮರು ಕಂಡು ನೀವು ಹೀಗೆ ಬಂದಿದ್ದೀ ಆದರೆ ಕೈಲಾಸವನ್ನು ತಲುಪುವುದು ಯಾವಾಗ? ಎಂದು ಗೇಲಿಮಾಡಲು ಕಾರಿಕಾಲಮ್ಮೆ ತನ್ನ ಭಕ್ತಿಮಹಿಮೆಯಿಂದ ಅವರಿಗೆ ಮೊದಲೇ ಶಿವಸಾನ್ನಿಧ್ಯವನ್ನು ಸೇರುವುದು ತಮಿಳು, ಸಂಸ್ಕೃತ ಕೃತಿಗಳಲ್ಲಿ ಕಂಡುಬರುವುದಿಲ್ಲ. ಇದನ್ನು ನಾವು ಮೊದಲಿಗೆ ಕನ್ನಡದಲ್ಲಿ ಹರಿಹರನ 'ನಂಬಿಯಣ್ಣನ ರಗಳೆ'ಯಲ್ಲಿ ಕಾಣುವೆವು. ಹರಿಹರನನ್ನು ವೀರಶೈವ ಕವಿಗಳು ಈ ಪ್ರಸಂಗ ನಿರೂಪಣೆ ಮಾಡುವಾಗ ಅನುಸರಿಸಿರುವರು.

ಚೇರಮನಿಗೆ ದೀಕ್ಷೆಯಾಗದ ಪ್ರಯುಕ್ತ ಶಿವನ ಸಭೆಯೊಳಗೆ ಪ್ರವೇಶ ಸಿಗಲಿಲ್ಲವೆಂದೂ ನಂಬಿಯಣ್ಣನ ಪ್ರಾರ್ಥನೆಯ ಮೇರೆಗೆ ಶಿವ ನಂದಿಯ ಮೂಲಕ ಚೇರಮನಿಗೆ ದೀಕ್ಷೆಕೊಡಿಸಿದನೆಂದೂ ನಂತರ ಪ್ರವೇಶ ದೊರೆಯಿತೆಂದೂ ಹರಿಹರ 'ನಂಬಿಯಣ್ಣನ ರಗಳೆ'ಯಲ್ಲಿ ಹೇಳಿರುವನು. ಹರಿಹರನ ನಂತರದ ಕವಿಗಳು ಈ ಪ್ರಸಂಗ ನಿರೂಪಣೆ ಮಾಡುವಲ್ಲಿ ಹರಿಹರನನ್ನು ಅನುಸರಿಸಿರುವರು. ಶಂಕರದೇವನ 'ಚೇರಮನ ರಗಳೆ'ಯಲ್ಲಿ ಚೇರಮನಿಗೆ ನಂಬಿಯಣ್ಣನೇ ಶಿವನ ಆದೇಶದಂತೆ ದೀಕ್ಷೆ ನೀಡುವನು. ಈ ದೀಕ್ಷಾಪ್ರಸಂಗ ಶೇಕ್ಕಿಳಾರನಲ್ಲಿ ಹಾಗೂ ಸಂಸ್ಕೃತದ 'ಶಿವರಹಸ್ಯ'ದಲ್ಲಿ ಕಂಡುಬರುವುದಿಲ್ಲ. ಚೇರಮನು ಸ್ವತಃ ರಚಿಸಿದ 'ತಿರುವುಲಾಪ್ಪುರಂ' ಕೃತಿಯನ್ನು ಶಿವನು ಕೇಳಿ ಆನಂದಿಸಿದನೆಂದು ಶೇಕ್ಕಿಳಾರ್ ಹಾಗೂ ಹರಿಹರ ಹೇಳುವರು. ಕುಮಾರ ಚೆನ್ನಬಸವ ಹಾಗೂ ಸಿದ್ಧನಂಜೇಶರು ಚೇರಮನು ರಚಿಸಿದ ಕೃತಿ 'ಶಿವಾನಂದಾಖ್ಯ'ವೆಂದು ಹೇಳುವರು.

ಕನ್ನಡದಲ್ಲಿ ಚೇರಮನನ್ನು ಕುರಿತು ಸ್ವತಂತ್ರವಾಗಿ ಕೃತಿರಚನೆ ಮಾಡಿರುವ ವಿರುಪರಾಜ ಹಾಗೂ ಚೇರಮಾಂಕರ ಮೇಲೆ ಪಾಲ್ಕುರಿಕೆ ಸೋಮನ ಪ್ರಭಾವ ವಿದ್ದರೆ, ಶಂಕರದೇವನ ಮೇಲೆ ಸ್ವಲ್ಪಮಟ್ಟಿಗೆ ಹರಿಹರನ ಪ್ರಭಾವ ಬಿದ್ದಿದೆ (ಕೃತಿಯ ಪ್ರಾರಂಭಭಾಗದಲ್ಲಿ). ಹರಿಹರೇತರಕೃತ ವಿರೂಪಾಕ್ಷಾಂಕಿತದ 'ಚೇರಮ ನಾಯನಾರ ರಗಳೆ'ಯು ಸಂಸ್ಕೃತದ ಉಪಮನ್ಯು 'ಶಿವಭಕ್ತವಿಲಾಸ'ದ ನೇರ ಪ್ರಭಾವಕ್ಕೆ ಒಳಗಾಗಿದೆ. ಚೇರಮನ ಕಥೆ ಮೂರು ಬಗೆಯ ಪರಂಪರೆಯನ್ನು ವಿಶಿಷ್ಟವಾಗಿ ಹೊಂದಿದೆ. ಮೊದಲನೆಯದು ಶೇಕ್ಕಿಳಾರನದಾದರೆ, ಎರಡನೆಯದು ಪಾಲ್ಕುರಿಕೆ ಸೋಮನಾಥನದು. ಕೊನೆಯದು ಹರಿಹರನದು. ಹರಿಹರನ ಹೊರತಾಗಿ ಚೇರಮನನ್ನು ಕುರಿತ ಕನ್ನಡ ಕೃತಿಗಳು ಶೇಕ್ಕಿಳಾರ್ ಹಾಗೂ ಪಾಲ್ಕುರಿಕೆ ಸೋಮನಾಥನ ಈ ಎರಡೂ ಪರಂಪರೆಯನ್ನು ತಮ್ಮಲ್ಲಿ ಮೇಳವಿಸಿಕೊಂಡರುವುದು ಗಮನೀಯ ಸಂಗತಿ. ನಮ್ಮ ಕನ್ನಡ ಕವಿಗಳಿಗೆ ತಮಿಳು ಬರದಿದ್ದರೂ ತಮಿಳು ಪೆರಿಯಪುರಾಣದಿಂದ ಪ್ರೇರಣೆಪಡೆದ ಸಂಸ್ಕೃತ ಉಪಮನ್ಯು 'ಶಿವಭಕ್ತಿವಿಲಾಸ'ವು ಅವರಿಗೆ ಶೇಕ್ಕಿಳಾರನ ಪರಂಪರೆಯನ್ನು ಅನುಸರಿಸಲು ಸಹಾಯ ಮಾಡಿದೆ. ಸುರಂಗನು ಅರುವತ್ತು ಮೂವರು ಪುರಾತನರು

ಪೊರೆದ ರೀತಿಯನ್ನು ಉಪಮನ್ಯುಮುನಿಯು ಕಣಾದನಿಗೆ ವಿವರಿಸಿ ಹೇಳಿದಂತೆ ತಾನು ಹೇಳುತ್ತಿರುವುದಾಗಿ ಒಂದೆಡೆ (ಆ. ೧. ಪ. ೩೦) ಹೇಳಿದರೆ, ಮತ್ತೊಂದೆಡೆಯಲ್ಲಿ (ಆ. ೧. ಪ. ೪೪) ಲೈಂಗ್ಯಪುರಾಣದಲ್ಲಿ ಬರುವ ಪುರಾತನರ ಚರಿತೆಯನ್ನು ಹೇಳುವುದಾಗಿ ತಿಳಿಸುವನು. ಹರಿಹರನು ತಮಿಳು, ಸಂಸ್ಕೃತ ಮೂಲಗಳಿಂದ ಪ್ರಭಾವಿತನಾದಂತೆ ಕಂಡುಬರುವುದಿಲ್ಲ. ಅವನು ತಮಿಳುನಾಡಿನುದ್ದಕ್ಕೂ ಸಂಚಾರ ಕೈಗೊಂಡು ವಿಷಯ ಸಂಗ್ರಹಣೆ ಮಾಡಿದಂತೆ ತೋರುತ್ತದೆ. ಸ್ವತಂತ್ರವಾಗಿ ಚೇರಮನ ಬಗೆಗೆ ಅವನು ರಗಳೆಯನ್ನು ಬರೆಯದಿದ್ದರೂ ಸಾಕಷ್ಟು ವಿವರಗಳನ್ನು ಚೇರಮನ ಬಗೆಗೆ 'ನಂಬಿಯಣ್ಣನ ರಗಳೆ'ಯಲ್ಲಿ ಪ್ರಸ್ತಾಪಿಸಿರುವನು. ಇವನ ಪ್ರಭಾವವೂ ಸಾಕಷ್ಟು ಪ್ರಮಾಣದಲ್ಲಿ ಇತರ ವೀರಶೈವ ಕವಿಗಳ ಮೇಲೆ ಆಗಿದೆ. ಚೇರಮನ ಕಥೆಯನ್ನು ಉಪಕಥೆಯ ರೂಪದಲ್ಲಿ ಹೇಳಿರುವವರು ಶಿಕ್ಕೇರಿಯಾರಾಧ್ಯ ನಂಜುಂಡನ (ಸು. ೧೫೫೦) 'ಭೈರವೇಶ್ವರ ಕಾವ್ಯ' ; ಶಾಂತಲಿಂಗದೇಶಿಕನ (೧೬೭೨) 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ' ; ಉತ್ತರದೇಶದ ಬಸವಲಿಂಗನ (೧೬೮೦) 'ಬಸವೇಶ್ವರ ಪುರಾಣದ ಕಥಾಸಾಗರ' ಇವೇ ಮೊದಲಾದ ಕಥಾಕೋಶಗಳನ್ನು ಅನುಸರಿಸಿರುವಂತಿದೆ.

ಒಟ್ಟಿನಲ್ಲಿ, ಚೇರಮನ ಕಥೆ ಕನ್ನಡದಲ್ಲಿ ಸಮೃದ್ಧವಾಗಿ ಬಂದಿದೆ. ತಮಿಳುನಾಡಿನ ಪುರಾತನರಲ್ಲಿ ಒಬ್ಬನಾದ ಚೇರಮನನ್ನು ಕುರಿತು ಸ್ವತಂತ್ರವಾಗಿ ಇಲ್ಲವೇ ಸಾಂದರ್ಭಿಕವಾಗಿ ಉಪಕಥೆಯ ರೂಪದಲ್ಲಿ ಕನ್ನಡದಲ್ಲಿ ವೀರಶೈವ ಕವಿಗಳು ಹೇಳಿರುವರು. ಇಷ್ಟು ಸಮೃದ್ಧವಾದ ಚೇರಮನನ್ನು ಕುರಿತ ಸಾಹಿತ್ಯ ಬೇರೆ ಭಾಷೆಗಳಲ್ಲೂ ಕಂಡು ಬಂದಿಲ್ಲವೆಂಬುದು ಹೆಮ್ಮೆಯ ವಿಷಯವಾಗಿದೆ. ಈ ದಿಶೆಯಲ್ಲಿ ವೀರಶೈವ ಕವಿಗಳ ಕೊಡುಗೆ ಸ್ಮರಣೀಯವಾಗಿದೆ.



## ಗ್ರಂಥಋಣ


1. ಪೆರಿಯಪುರಾಣಂ ಭಾಗ ೧ ಮತ್ತು ೨ (ತಮಿಳು ಮೂಲದೊಡನೆ ಕನ್ನಡಾನುವಾದ ಡಾ|| ಎ. ಶಂಕರ ಕೆದಿಲಾಯ) ಪ್ರ : ಮದ್ರಾಸು ವಿಶ್ವವಿದ್ಯಾಲಯ, ಮದ್ರಾಸು.

2. The religion and philosophy of Tevaram Book I and II : M. A. Dorai Rangaswamy, pub: Madras university, Madras.

3. ಪುರಾತನ ಭಕ್ತವಿಲಾಸ (ಪೆರಿಯಪುರಾಣದ ಕನ್ನಡ ಸಂಗ್ರಹಾನುವಾದ) : ಎಸ್. ಸಿ. ಚೆನ್ನವೀರಪ್ಪ.

4. ತಿರುತ್ತೊಂಡತ್ತೊಗೈ (ತಮಿಳು ಮೂಲದೊಡನೆ ಕನ್ನಡಾನುವಾದ ಡಿ. ಕೃಷ್ಣಮೂರ್ತಿ, ಚ. ಸುಂದರೇಶನ್)

5. ಪಾಲ್ಕುರಿಕೆ ಸೋಮನಾಥನ ಬಸವಪುರಾಣಮು ಸಂ : ಬಂಡಾರು ತಮ್ಮಯ್ಯ ಪ್ರ : ವಾವಿಳ್ಳ ರಾಮಸ್ವಾಮಿಶಾಸ್ತ್ರುಲು ಅಂಡ್ ಸನ್ಸ್ (೧೯೫೨).

6. ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತ್ರ ಸಂ : ಡಾ|| ಚಿಲಕೂರಿ ನಾರಾಯಣರಾವ್ (೧೯೩೯).

7. ಹರಿಹರನ ನಂಬಿಯಣ್ಣನ ರಗಳೆ ಸಂ : ತೀ. ನಂ. ಶ್ರೀಕಂಠಯ್ಯ, ಪ್ರ : ಕಾವ್ಯಾಲಯ, ಮೈಸೂರು (೧೯೬೩).

8. ಭೀಮಕವಿಯ ಬಸವ ಪುರಾಣ ಸಂ : ಡಾ|| ಆರ್. ಸಿ. ಹಿರೇಮಠ ಪ್ರ : ನಿ. ಪ್ರ. ಸ್ವ. ಮಹಾಂತಸ್ವಾಮಿಗಳು, ಶ್ರೀಗುರು ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ (೧೯೭೧).

9. ನೀಲಕಂಠಾಚಾರ್ಯನ ಆರಾಧ್ಯ ಚಾರಿತ್ರ ಸಂ : ಎನ್. ಬಸವಾರಾಧ್ಯ ಪ್ರ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು (೧೯೮೦).

10. ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ ಸಂ : ಪಂಡಿತ ಎಸ್. ಬಸಪ್ಪ ಪ್ರ : ಮೈಸೂರು ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು.

11. ಚಿಕ್ಕಮಲ್ಲಿಕಾರ್ಜುನನ ಧರ್ಮಸಂಪಾದನೆ ಸಂ : ಎಸ್. ವಿದ್ಯಾಶಂಕರ, ಹು. ಕಾ. ಜಯದೇವ್ ಪ್ರ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು (೧೯೭೪).

12. ಸುರಂಗನ ತ್ರಿಷಷ್ಟಿ ಪುರಾತನ ಚಾರಿತ್ರಂ ಸಂ : ಡಾ|| ಆರ್. ಸಿ. ಹಿರೇಮಠ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (೧೯೬೬).

13. ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣಂ ಸಂ : ಶಿವಪ್ಪಶಾಸ್ತ್ರಿ (೧೯೦೭).

14. ವಿರೂಪರಾಜನ ತ್ರಿಭುವನ ತಿಲಕ ಸಂ : ಟಿ. ಚಂದ್ರಶೇಖರನ್ ಪ್ರ : ಮದ್ರಾಸ್ ಸರಕಾರದ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ್ ಸೀರೀಸ್–೩೧ (೧೯೫೪).

15. ವಿರೂಪರಾಜನ ಗುರುಭಕ್ತ ಚಾರಿತ್ರ ಸಂ : ಕೆ. ಆರ್. ಶೇಷಗಿರಿ ಪ್ರ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು (೧೯೭೨).

16. ಚೇರಮಾಂಕನ ಚೇರಮಕಾವ್ಯ ಸಂ : ಎನ್. ಬಸವಾರಾಧ್ಯ ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು (೧೯೫೬)

17. ಕುಮಾರ ಚೆನ್ನಬಸವನ ಪುರಾತನರ ಚರಿತೆ ಸಂ : ವೈ. ಸಿ. ಭಾನುಮತಿ ಪ್ರ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು (೧೯೭೬).

18. ವಿರೂಪಾಕ್ಷಪಂಡಿತನ ಚೆನ್ನಬಸವ ಪುರಾಣ ಸಂ : ಶಿ. ಶಿ. ಬಸವನಾಳ, ಪ್ರ : ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯಶಾಖೆ, ಧಾರವಾಡ (೧೯೩೪).

19. ಶಂಕರದೇವನ ಪ್ರಸನ್ನ ಶಂಕರಲಿಂಗ ರಗಳೆಗಳು ಸಂ : ಎಂ. ಎಸ್. ಸುಂಕಾಪುರ ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (೧೯೭೬).

20. ಶಾಂತಲಿಂಗದೇಶಿಕನ ಭೈರವೇಶ್ವರಕಾವ್ಯದ ಕಥಾಮಣಿಸೂತ್ರ ರತ್ನಾಕರ ಭಾಗ ೧ ಮತ್ತು ೨ ಸಂ : ಡಾ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ ಪ್ರ : ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ (೧೯೬೮).
21. ಉತ್ತರದೇಶದ ಬಸವಲಿಂಗನ ಬಸವೇಶ್ವರಪುರಾಣದ ಕಥಾಸಾಗರ ಸಂ : ಎಸ್. ಉಮಾಪತಿ.
22. ಮುಖಬೋಳು ಸಿದ್ಧರಾಮನ ಷಟ್ಸ್ಥಲ ತಿಲಕ ಸಂ : ವೈ. ಸಿ. ಭಾನುಮತಿ ಪ್ರ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು (೧೯೭೯).
23. ಶಿವಶರಣ ಸಂಪುಟ ಸಂ : ಎಚ್. ದೇವೀರಪ್ಪ ಪ್ರ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು (೧೯೭೩)
24. ವೀರಭದ್ರಕವಿಯ ಅರುವತ್ತುಮೂವರು ಪುರಾತನರ ಪುರಾಣ ಸಂ : ಶಾಂತರಸ.
25. ಪುರಾತನದೇವಿಯರ ತ್ರಿವಿಧಿ ಸಂ : ಚೆನ್ನಮಲ್ಲಿಕಾರ್ಜುನ, ಸದ್ಧರ್ಮ ಗ್ರಂಥಮಾಲಾ–೧೨ (೧೯೩೩).
26. ಶಿವರಹಸ್ಯ ಸಂಪುಟ ೨೪ (ಸಂಸ್ಕೃತ ಮೂಲದೊಡನೆ ಕನ್ನಡ ಗದ್ಯಾನುವಾದ : ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ) ಪ್ರ : ಜಯಚಾಮರಾಜೇಂದ್ರ ಗ್ರಂಥಮಾಲೆ, ಮೈಸೂರು (೧೯೫೧).
27. ಸಿದ್ಧನಂಜೇಶನ ಗುರುರಾಜ ಚಾರಿತ್ರ ಸಂ : ಸಂ. ಶಿ. ಭೂಸನೂರ ಮಠ ಪ್ರ : ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ (೧೯೫೦).
28. ಅದೃಶ್ಯಕವಿಯ ಪ್ರೌಢರಾಯನ ಕಾವ್ಯ ಸಂ: ಸಂ. ಶಿ. ಭೂಸನೂರ ಮಠ ಪ್ರ : ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ (೧೯೫೭).

"ಡಾ॥ ವಿದ್ಯಾಶಂಕರರು ಈ ತೆರನಾದ ಸಂಶೋಧನಾ ಕ್ಷೇತ್ರಕ್ಕೆ ಹೊಸಬರೇನಲ್ಲ. ಹಲವು ಸಂಶೋಧನಾತ್ಮಕ ಲೇಖನಗಳನ್ನು ಬರೆದಿದ್ದಾರೆ; ಗ್ರಂಥ ಸಂಪಾದನೆ ಮಾಡಿದ್ದಾರೆ. ಇಂತಹ ಕೆಲಸಕ್ಕೆ ಕೈಹಾಕುವವರ ಸಂಖ್ಯೆ ಇಳಿಮುಖವಾಗುತ್ತಿರುವಾಗ ಇವರಂಥವರು ಕೆಲವರು ಭರವಸೆ ಕೊಡುತ್ತಿರುವುದು ಸಂತೋಷದ ಸಂಗತಿಯಾಗಿರುತ್ತದೆ. ಇವರೀಗ ಹೊರತರುತ್ತಿರುವ ಪ್ರಬಂಧವು ಕನ್ನಡ ಸಂಶೋಧನಾಕ್ಷೇತ್ರದ ಒಂದು ಹೊಸ ಅಲೆ ಎನ್ನಬಹುದು. ತಮಿಳು, ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಚೇರಮನ ಮೇಲೆ ರಚಿಸಿರುವ ಕೃತಿಗಳ ಸಾರಸಂಗ್ರಹವನ್ನು ಹೇಳಿ ಅವುಗಳಲ್ಲಿರುವ ಸಾಮ್ಯವೈಷಮ್ಯಗಳನ್ನು ಚೆನ್ನಾಗಿ ವಿವೇಚಿಸಲಾಗಿದೆ ಇಲ್ಲಿ. ಈ ಬಗ್ಗೆ ಸಂಶೋಧನೆ ನಡೆಸಬಯಸುವವರಿಗೆ ಈ ಪ್ರಬಂಧವು ದಾರಿದೀಪವಾಗಿದೆ ಎಂದು ಹೇಳಬಹುದು."

—ಎಚ್. ದೇವೀರಪ್ಪ.